ಅಶೋಕೆಯ ನೆೞಲೊಳ್ ಬೆಸದ ಮೆಯ್ಯಂ ಮುಱಿದು ಕಾಯ್ತೊಱಗಿದ ಬೞಿ ಕಂಗಂ ಮಲಂಗಿ ಕುಮಾರಂ ಕುಳ್ಳಿರ್ದನನ್ನೆಗಂ—

ಕೊನೆಗೊಂಬಲ್ತು ಬಿಸಾಂಕುರಂ ಸಿರಮದಲ್ತುತ್ಕಚ್ಛಪಂ ನೇತ್ರಮ |
ಲ್ತು ಸಿಮೇಷಂ ಮದಮಲ್ತು ವಾರಿ ಕಿವಿಯಲ್ತಬ್ಜಚ್ಛನಂ ಪದ್ಮಕಾ ||
ನನಮಲ್ತಂಬುಜಮಾನೆಯಲ್ತು ಸರದೊಳ್ ಲೀಲಾಲಸಂ ಪುಟ್ಟಿದ |
ತ್ತನೆ ಮಾಡಿತ್ತವಗಾಹಮಿರ್ದ ಕೊಳದಿಂ ಕಾಯ್ದೊಂದು ದಂತಾವಳಂ ||

ತೋರದೆರೆ ಮುಱಿಯೆ ಮಾಡುವ |
ವಾರಣಮಂ ಪೋಲ್ತುದಡಸಿ ನಿಡುಗೆಯ್ಯಿಂ ಭಂ ||
ಡಾರಿಸಿ ಮೊಡರಿದ ತಳಿಯುಂ |
ಬಾರೆಯುಮಂ ಮುರಿಯೆ ಪೊಯ್ದು ಪೊಱಮಡುವಿಭಮಂ||೧೧೩

ವ|| ಅಂತು ಮಕರಾಕರದಿಂ ಪೊಱಮಡುವ ಕರಿ ಮಕರದಂತೆ ಕಮಳಾಕರದಿಂ ಪೊಱಮಟ್ಟು ದಡಂಗೊಳ್ವಲ್ಲಿ ಕಿೞ್ತು ಕೆಡೆದು ಕಾಲೊಳ್ತೊಡರ್ದು ಬಂದ ಬಿಸವಲ್ಲಿಗಳ್ ನೆಲನನೊಡೆದು ನಾಗಲೋಕಮಂ ಪುಗವೇಡೆಂದು ಗರುಡನ ಕಾಲಂ ಪತ್ತಿ ಬಿಡದ ಪಾವುಗಳಂತಿರ್ದುವದಱ ಗಾಳಗೆ ವನಗಜಘಟೆಗಳೆಲ್ಲಂ ಘನಘಟೆಗಳಂತಿರೋಡಿದೋಡಿದುವು | ಮೇಲ್ವಾಯ್ದ ಸಿಂಗಂಗಳೆಲ್ಲಮಾದಿಯ ಪಂದಿಯ ಪೇಱಿದ ಗ್ರಾಮಸಿಂಹಂಗಳಂತಿರ್ದುವು | ಪೆಳ್ಱ್ ಬೆಂಗುಡುವ ಬಟ್ಟಾನೆಗಳಂ ಮಣಿಯೇಱಿಂದಿಱಿದೆತ್ತಿದಲ್ಲಿ ಮದದ ಮಸಿಯಿಂ ಮಳೀಮಸಮಾದ ಮುಸುಂಬು ಮುಸುವಿನ ಮುಸುಂಬಿನಂತೆತ್ತಿರೆ ಕಡಲಂ ಕಟ್ಟಲೆಂದು ಬೆಟ್ಟಮಂ ಕಿೞ್ತೆತ್ತಿದ ಸುಗ್ರೀವನಂತಿರ್ದುವು | ವನಮಂ ಪೊಕ್ಕು ಮರಮುಸಕದಿಂ ಮರಮಾಯ್ದು ಮರದುಱುಗಲಂ ಕಿೞ್ತೀಡಾಡುವಲ್ಲಿ ದಶಗ್ರೀವನ ವನಮಂ ಕಿೞ್ತೀಡಾಡುವಣುವನಂತಿರ್ದುದು | ಪಲ್ಲವಮನುಡಿದು ಸೂಸುವಲ್ಲಿ ದೆಸೆಯಾನೆಗಾಳೆಗಕ್ಕೆ ಪುಲ್ಲಂ ಸೂಸುವಂತಿರ್ದುದು | ಅಂತು ಮಾಮಸಮಸಗಿ ಬಿಸಟಂಬರಿವ ಮದಕರಿಯಂ ಕುಮಾರಂ ಕಂಡೀಕಟ್ಟಾನೆಯನೇಱಿದೊಡಾನೆಯಾನೆವಿನ್ನಾಣೆಯೆಂದು ಸಿರಂದೋಱಿದ ಸರದ ಬೞಿಯನೆ ಗಳೆವೞಿಯ ಪಾವಿನಂತೆ ಮೊಗದ ಬಿಗಿಪುಂ ಕಣ್ಣ ಬೀಡುಂ ಬೆರಸು ಗಾಳಗೆ ಗಱಿಮಾಡಿದಂತೆ ಗಿಱ್ರನೆಯ ಪರ್ಣನೆಯುಂ ಚಪ್ಪರಿಸಿ ಪಿಡಿದಾಸೆ

ಗೊಟ್ಟು ಪುಷ್ಕರಣದೊಳ್ ಕೆಂದಳಂ ಕೆಂದಳರಂತೆ ತೊಳಗೆ ದೀರ್ಘಾಂಗುಳಯಿಂ ಪಿಡಿದು ಗರುಡನೊಪ್ಪಮುಂ ಗಾಳಿಯ ನುಸುಳುವುಂ ಕೈಕೊಂಡು ಕೋಡಾಡಿ ಮನವೆ ಮಾನಸನಾದಂತೆ ಪರಿದು ಪರಿಯೊಳ್ ಬಿಳಲ್ದಿ ಕುಡೆಂಬ ತಿಕ್ಕುವೊಳಗಿಂ ಬೆಂಗೆಯಿಂ(?) ಎಂಬಂತೆ ಬೂತಾಟನಂಗೆಯ್ದು ಗಜದ ಬೆಂಗೆ ಸಿಂಗದಂತೆ ಲಂಘಿಸಿಯಾನೆಯ ಪೊರಜೆಯಾಗೆ ಪೂರ್ವಾಸನದೊಳ್ ಪದುಳಮಿರ್ದು ಮುಬ್ಬ ಬಾಪ್ಪುಬಾಪ್ಪೆಂದು ಕುಂಭಸ್ಥಳಮಂ ನಾಸ್ಫಾಳಿಸಿ ಬೀರಸಿರಿಯ ಗುರುಕುಚಮುಮನುಗುರೊಳುಗಿದು ತೊಡಗಂಗಳ್ ರೊಡಗವಾಗೆ ಹರಿಣಂಗಳ್ ಹರಿಕಾಱಂಗೆ ಪರ್ವತಂಗಳ್ ಪ್ರತಿಗಜಂಗಳಾಗುರುಳ್ ನೂಂಕಿಯುಂ ಸುರುಳ್ ನೂಂಕಿಯುಂ ಅಡ್ಡವಿಕ್ಕಿಯುಂ ಪೊಕ್ಕು ಪರಿಯಿಸಿಯುಂ ಅಂತಪ್ಪ ಕಟ್ಟಾನೆಯಂ ಕೆಪ್ಪವಳವಡಿಸುವಂತೆ ಮಡದೊಳಮುಂಗುಟದೊಳಳವಡಿಸಿದ ರಾಜಪುತ್ರನ ಬಲ್ಪಿಂಗಂ ಬಿನ್ನಣಕ್ಕಂ ಬೆಕ್ಕಸಂಬಟ್ಟು—

ಆಪ್ರಸಾದವದೊಳರ್ಧರ ।
ತಿಪ್ರೌಢರ್ ಖಚರರಜಿರರುಚಿದಿವಿಜಧನು ॥
ರ್ಧಿಪ್ರಮಣಿಮುಕುಟವಿಕಟಪ
ಟುಪ್ರಭೆಯಿಂ ಭೂಪಭಾನುಗರ್ಘ್ಯಮನಿತ್ತರ್ ॥೧೧೪॥

ಮದಪುರುಷರಗಿದು ರದನಿಯ ।
ಮದವಿೞ್ದೞ್ದಪುದೆಂದೆನೆ ಮೆಯ್ಯಿಕ್ಕಿದವೊಲ್ ॥
ವಿದಳಿತವದನಪಯೋಜರ್ ।
ಪದೆದಚಿರಂ ಖಚರರೀರ್ವರವನತರಾದರ್ ॥೧೧೫॥

ವ॥ ಆಗಿ ಕೆಯ್ಗಳಂ ಮುಗಿದು ದೇವ ಬಿನ್ನಪಮಿಾಯಾನೆಯನೇಱುವೆನೆಂಬನ ನಸುನೆತ್ತಗೆಱಗು ಮುಸಿವನ ಮುನಿಗುಂ ಪರಿಯಿಸುವೆನೆಂಬನ ಪಸಿಪ್ಪರೆಗುಯಿಾಯು ತಿವರ್ತಿಯುಂ ವಶವರ್ತಿಮಾಡಲುಮಂಕುಶಮಿಲ್ಲದಂಕಿಸಲುಂ ನಿನಗೆ ತೀರ್ಪುದು ನಿನಗಲ್ಲದ ದೇವನುಮೇತಱ ದೇವನೆಂದು ಗಳಗರ್ಜರಂತೆ ಪೊಗೞ್ದು ಬೇಗಮಿಾಗಜದಿಮಿೞ್ದೆಮ್ಮಧಿವಾಸನಾದೇಶಭಾಗಮನಿೞ್ಪುವುದೆನೆ ವಸುದೇವನಿೞ್ದು ನೀಮಾರ್ಗದೇನೆಂಬುದೆನೆ ವಿದ್ಯಾಧರರಿಂತೆಂದರ್—

ಮಾಣಿಸಿ ನಿರ್ದಯಂ ಜಿನಪತಿಸ್ನಪನೋತ್ಸವಮಂಗಳಾನಕ |
ಕ್ವಾಣಮದೊಮ್ಮೆಯುಂ ಜಿನಮಹಾಮಹಮಂ ನಲವಿಂದೆ ನೋಳ್ಪ ಕ ||
ಣ್ಜಾಣೆಮೆಯಿಕ್ಕಲೀಯದಿರೆ ತಾನೆ ನಗೇಂದ್ರದ ದಕ್ಷಿಣೋತ್ತರ |
ಶ್ರೇಣಿಗೆ ತಂದು ಮುಂದಿಡುವುದಾರುಹತಂ ಸುರಲೋಕಶೋಭೆಯಂ ||೧೧೬||

ವ|| ಆವಿಜಯಾರ್ಧಪರ್ವತದ ದಕ್ಷಿಣಶ್ರೇಣಿಯ ನಿಳಿಂಪಕಿನ್ನರಗೀತಮೆಂಬ ಪೊೞಲನಾಳ್ವಂ ಮಹಾಭಾಗನಶನಿವೇಗನೆಂಬನಂಬರಚರನಾತನ ಮಗಳ್ ಪರಪುರುಷಸುಖಶಾಲ್ಮಲಿ ಶಾಲ್ಮಲಿಯೆಂಬಳಾಕೆಗನುರೂಪನಪ್ಪ ಪುರುಷನಂ ಖಚರಕುಲದೊಳಂ ಭೂಚರಕುಲದೊಳಂ ಕಾಣದೆ ಖಿನ್ನನಾಗಿರ್ಪುದುಮಾದೇಶಪುರುಷನುಮೀಮದಗಜಮನೇಱದನೆ ನಿಜಾತ್ಮಜೆಗೆ ಮದವನಿಗನೆಂದೊಡಾನಂದದಿನೆಮ್ಮಾಳ್ದನೆಮ್ಮಿರ್ವರುಮನೀ ಕರಿಪತಿಗೆ ಕಾಪಂ ಪೇೞ್ದನಂದಿಂದಿತ್ತಲೀಯಡವಿಯುಲಡಿಮಿಡುಕದೆ ಮೃಗಂಗಳಾಗಿರ್ದೆವೆಂದೆಮ್ಮ ಪುಣ್ಯಂ ಬರ್ಪಂತೆ ಬಂದು ಸಾಹಸಪುರುಷನುಮಾದೇಶಪುರುಷನುಮಾಗೆಯುಮ್ಮ ತಪಮುಂ ಶಾಲ್ಮಲಿದತ್ತೆಯ ಕಾಮತಾಪಮುಂ ಸಫಲಮಾದುದೆಂದು—

ಇದು ದಿವ್ಯಶ್ರೀವಿಮಾನಂ ಮನಮೊಸೆದಿದನೀನೇಱು ಬಾ ಪೋಪ [ಮಾ ತೋ |
ರ್ಪುಗೆ ಕಂಡ್ಯೆ ಖಂಡಿತಾರಿಕ್ಷ್ಮಯಜಯವಿಜಯಾರ್ಧಾಚಲಂ ನಿನ್ನನೆಯ್ತಂ ||
ಬಿದಿಗೊರ್ಳ್ವಂದಿತ್ತ ಬರ್ಪುಜ್ವಳಜಳಧರದಿಂ ನಿನ್ನ ಬರ್ಪುತ್ಸವಕ್ಕೆ |
ತ್ತಿದವೊಲ್ ಕೂಟಾಗ್ರದೊಳ್ ನಿರ್ಝರಪಟಳಪತಾಕಾಳಿಯಿಂ ಲೀಲೆಯಿಂದಂ ||

ಆನೆಯನೇಱದೆಯೋಱು ವಿ |
ಮಾನಮನೇಱದಪಯಚಳಪತಿಚೂಳಕೆಯಂ ||
ತಾನೆ ಕುಡುಗುಂ ಮಹೋನ್ನತ |
ಮಾನೋನ್ನತಿಯಂ ನತೋನ್ನತಾರೋಹಣಮಂ ||೧೧೭||

ವ || ಎಂದಾಖಚರಯುಗಳಮವಟ್ಟೈಸಿದ ಮಣಿಮಯ ವಿಮಾನಮನೇಱ—

ಪವನಪ್ರೇಂಖಾನಳಪ್ರೋಚ್ಛಳತಮರಕತಸ್ಥೂಲರತ್ನಾವಳೀಪ |
ಲ್ಲವಮಾಳಾತೋರಣಂಗಳ್ಪಸುರ್ಗುದುರೆಗಳಂ ಪೂಡಿದಂತೊಪ್ಪೆ ಕಯ್ಯೊಳ್ ||

ನವಲೀಲಾನೀರಜಂ ರಂಜಿಸೆ ನಿಜರಥಮಂ ಬಂದು ಮಾರ್ತಂಡನೊಲ್ದೀ |
ಉವವೊಲ್ತಾನೇಱಿದಂ ಕಾಂಚನಖಗರಥಮಂ ಮೂರ್ತಿಮಾರ್ತಂಡದೇವಂ ||

— ಗದ್ಯ —

ಇದು ಮೃದುಪದಬಂಧಬಂಧುರ ಸರಸ್ವತೀಸೌಭಾಗ್ಯವ್ಯಂಗಭಂಗಿನಿಧಾನದೀಪವರ್ತಿ
ಚತುರ್ಭಾಷಾ ಕವಿಚಕ್ರವರ್ತಿ ನೇಮಿಚಂದ್ರ ಕೃತಮುಂ
ಶ್ರೀಮತ್ಪ್ರತಾಪಚಕ್ರವರ್ತಿ ವೀರಬಲ್ಲಾಳದೇವ ಪ್ರಸಾದಾಸಾದಿತ
ಮಹಾಪ್ರದಾನ ಸೆಜ್ಜಿವೆಳ್ಳ ಪದ್ಮನಾಭದೇವ ಕಾರಿತಮುಮಪ್ಪ

## ನೇಮಿನಾಥ ಪುರಾಣದೊಳ್

ಪಂಚಮಾಶ್ವಾಸಂ ಸಮಾಪ್ತಂ.



# ಷಷ್ಠಾಶ್ವಾಸಂ

---

ಶ್ರೀಪತಿಪಾದಂ ಗಗನಾ ।
ಕೂಪಾರದ ಮುತ್ತುಬೆಟ್ಟವಾದವೊಲೆಸೆದಿ ॥
ರ್ಪಪರ್ವತಕ್ಕೆ ಕೃತಿಕುಳ ।
ದೀಪಂ ಕವಿತಾವಸಂತವಸಿತಾಕಾಂತಂ ॥೧॥

ತುಱುಗಿದ ಕಡಲಂ ಸೂಸುವ ।
ಸಿಱುಮುಗಿಲೊಳ್ ಪರಿವ ಗಗನಯಾನದೊಳರಸಂ ॥
ನೆಱೆ ಪೋಲ್ತಂ ಸ್ತ್ರೀರತ್ನಮ ।
ನಱಸಲ್ ತಾಂ ಪಾಱಿ ಪೋಪ ಸಾಯಾಂತ್ರಿಕಮಂ ॥೨॥

ಕುಲಗಿರಿಸಂಕುಳಂ ಸುಕವಿಶೇಖರನುನ್ನತ ಗಂಡುಲಜ್ಜೆಯು ।
ಗ್ಗಲಿಸೆ ಕುನುಂಗುವಂತೆಸೆದು ತೋಱಿದುವಂದುಮಿಸುರ್ಪ ಸಂ ॥
ಕುಲಮನೆ ಕೂಡೆ ಕೊಂಕಿ ಪರಿಗೊಳ್ವ ನದೀನದಜಾಳದಿಂ ಮಹೀ ।
ವಲಯಮಲೇಖದಂತೆಸೆದುದಾಜಗತೀಪತಿಗೂರ್ಧ್ವಯಾನದೊಳ್ ॥೩॥

ವ॥ ಅಂತುಮಲ್ಲದೆ

ಸಾಗರಮೊಂದು ಕಂಕಣದಿನೂರ್ವರೆ ಕಾವಲಿಯಿಂ ಕುಳಾದ್ರಿಗಳ್ ।
ಪಾಗಲ ಕಾಯ್ಗಳಂ ಮದಗಜಾವಳಿ ಪಂದಿಗಳಂ ನದೀವ್ರಜಂ ॥
ಭೋಗಿಗಳಂ ತಡಾಗತತಿ ಕಣ್ಗಳಗುನ್ನತಪಾದಪೋತ್ಕರಂ ।
ಶ್ರೀಗಿರಿಯಿಂ ಕರಂ ಕಿಱಿಯವಾದುವು ಕಣ್ಗೆ ಗುಣಾವಲೋಕನಾ ॥೪॥

॥ ಮಾಲಿನೀವೃತ್ತಂ ॥

ಪರಿಗತಬಹುವರ್ಣಂ ತತ್ಸವಿಭಾಭೂತಪದ್ಮಾ ।
ಕರಸಲಿಲದಚಲಾರಣ್ಯನಿಮ್ನೋನ್ನತ ಶ್ರೀ ॥
ಕರಮೆಸೆದುದು ಜಂಬೂದ್ವೀಪಮಾದಂ ಬೆಡಂಗಂ ।
ಬೆರಸಿ ಬರೆದ ಜಂಬೂದ್ವೀಪದಂತೀಕ್ಷಣೀಯಂ ॥೫॥

ವ॥ ಅಂತು ಕಿನ್ನರಗೀತಕ್ಕೆ ಪೋಗಿ ಕಾಲ್ಮಲಿದತ್ತೆಯೊಳ್ಮದುವೆನಿಲೆ—

ತುದಿ ಮೊದಲಪ್ಪುದಿಂಪಡರೆ ಕೂಡುವ ಕೂಟದೊಳೀಕ್ಷಣಕ್ಕೆ ರೂ ।
ಪದೆ ಪೊಸತಪ್ಪುದೊಲ್ದೆಳಸಿ ನೋಡುವ ನೋಟದೊಳೀನನಿತ್ತನಿ ॥
ತ್ತುದೆ ಬೆಲೆಯುಪ್ಪುದೆನ್ನಸುಗೆ ಬೇಡುವ ಬೇಟದೊಳೆನ್ನ ನಲ್ಲನಂ ।
ಮದನವಿಕಾರಸಾರಸುಖದಿಂದಮೆ ಮಾಡದೆ ಮಾಣನಜ್ಜಜಂ ॥೬॥

ಬಾಯ್ಪುಸವೋದತ್ತತಡರೆ ಸುಂಬಿಸೆಯುಂ ಬಗೆವೆಂತು ತಳ್ತೊಡಂ
ಮೆಯ್ಪುಸವೋಡವಪ್ಪ ಗಡ ಕಣ್ಪುಸವೋಡದಿದೆಂತು ನೋಡೆಯುಂ ॥
ಕೆಯ್ಪುಸದಂತವಂ ನೆರೆದೊಡಂ ಮನವಾಱದದರ್ಕೆ ಸಕ್ತಿಯಿಂ ।
ಸಯ್ಪೞಗಾದ ಮೆಯ್ಪುವಿರ್ಗಳೆಂಬವೊಲಂಗನೆ ಕೂರ್ತು ಕೂಡಿದಳ್ ॥೭॥

ಸುರಯಿಯ ಮುಗುಳ್ಗಳೊಳುರುವೞದಳಪತಿ ।
ಬಿರಯಿಸೆ ಬೆರಸುವ ಬಸದನ 'ಜೆಸಸಿರೆ' ॥
ಸುರತಸುರಭಿರಸಪರಿಮಳಮಿೞತರೆ
ಬೆರಸಿದನರಮಗಸ್ಮರಸಿಯೊಳಸದಿರೆ ॥೮॥

ವ॥ ಅಂತು ಬಂದ ಬಸಂತದೊಳ್ ವನಜಲಕೇಳಿಯುನಾಡಿ ಬಂದು ಬೞಲ್ದುದುಮಲ್ಲದೆ ಸುರತಶ್ರಾಂತರಾಗಿ ಶಾಲ್ಮಲಿದತ್ತೆಯುಂ ವಸುದೇವನುಂ ದೇವದಂಪತಿಯಂತೆ ಸೌಧಾಗ್ರತಲದೊಳ್ 'ತಳ್ತು' ಪವಡಿಸುತ್ತುಮಿರೆ:—

ಬಿಡಿಸಿ ಭುಜಂಗಿಯ ತಪ್ಪಂ ।
ಪಿಡಿದುಯ್ವಂತೆಳೆಯ ಮಾಣಿಯಜಾತಮನಳಿಪಿಂ ॥
ತೊಡರ್ದಾಖಚರಿಯ ತಪ್ಪಂ ।
ಬಿಡಿಸಿ ನೃಪಾತ್ಮಜನನೊರ್ವನುಯ್ದಂ ಖಚರಂ ॥೯॥

ವ॥ ಆಗಳಾಶಾಲ್ಮಲಿದತ್ತೆಯುಮೆೞ್ಚತ್ತು ಚಂದನಗಾತ್ರಿಯಂ ಬೆನ್ನಟ್ಟುವ ಭುಜಂಗಿಯಂತೆ

ಬಿಕ್ಕನೆ ಸೆಳ್ಳಂಗಿಸಿಂ ನೂಲೆಯ ಗೞಳಿಸಿ ಗಂಡುಡೆಯುಟ್ಟು ಸಜ್ಜುಗಂ ।
ಪಿಕ್ಕೆ ಬೞಲ್ದ ಬಿಲ್ಲಿಣಿಬಿನೊತ್ತಿದೆಱಂಕೆವೊಲೆತ್ತಿಕೊಂಡವೊಲ್ ॥
ಪಕ್ಕದ ಬಾಳುಮತ್ತಪರಮುಂ ಪೊಳೆಯುತ್ತಿರೆ ಪಾಱದಳ್ ನಭೋ ।
ಗ್ರಕ್ಕತಿವೇಗದಿಂ ಖಚರಕಾಮಿನಿ ಕಾಮನ ವೀರಲಕ್ಷ್ಮಿವೋಲ್ ॥೧೦॥

ಪಾ—1. ಜೆಸಸಿರೆ. 2. ಸೊ. 3. ಪಳ್ತು.

ಅತ್ತ ಪರಂ ಸಹಸ್ರಕಿರಣಂ ಪೊಣರ್ವಕ್ಕಿಯನಪ್ಪಿದಂತೆ ಪೊ ।
ನ್ನತ್ತ ಪರಂ ತಳತ್ತಳಿಸೆ ಪೆರ್ವೊಲೆಯೊಳ್ ಪೊಳೆಪಿಂ ತೊಡಂಕೆ ಕ ॥
ಣ್ಗತ್ತಿಗೆ ಗೊಂಬಿನೊಳ್ ನಲಿದು ನರ್ತಿಸುವೊಂದೆಳಮಿಂಚಿನಂತೆ ಮಿಂ ।
ಚುತ್ತಿರೆ ತೋಳ ಬಾಳನೊಲೆಯುತ್ತುಮೆ ಶಾಲ್ಮಲಿದತ್ತೆ ತೂಗಿದಳ್ ॥೧೧॥

ವ॥ ಅಂತು ಪಾಱಿಪೋಗಿ ಕೆಲದಂತರದೊಳ್ ಕುಮಾರನಂ ಕೌಂಕುಳೊಳವುಂಕಿಕೊಂಡು ಪೋಪ ಖಚರನಂ ಕಂಡು ಕಡುಮುಳಿದೆಲೆಲೆ ಸತ್ತೆಯಿನ್ನೆತ್ತ ಪೋದಪೆಯೆಂದು ಮಧುಮತ್ತಕೋಕಿಲಕುಮಾರಿಯಂತೆ ಖಚರಕುಮಾರಿ ಗಜಱಿ ಗರ್ಜನಂಗೆಯ್ದು—

ಬಿಡು ಬಿಡು ಮನ್ಮನಃಪ್ರಿಯನನಲ್ಲದೊಡಸ್ಮೆನುತಾಕೆ ಖಡ್ಗಮಂ
ಪಿಡಿದೊಡನಾಲಿಯುಂ ಜಲಮುಮೊರ್ಮೆವಿನಂ ಶತಖಂಡಮಪ್ಪಿನಂ ॥
ಸಿಡಿಲೆಳಮಿಂಚು ನುಚ್ಚುನುಱಿಯಪ್ಪಿನೆಗಂ ಕಡಿಖಂಡಮಪ್ಪಿನಂ ।
ಪೊಡೆವಳದೊಂದು ನೀಲಘನಮಂ ಪೊಡೆವಂತಿರೆ ಮತ್ತದಂತಿಯಂ ॥೧೨॥

ಸೋಗೆಯ ಕಲರುತಿಗಳ್ಕಿದ
ನಾಗರಪೊಲ್ ಗಜಱುವವಳ ದನಿಗಳ್ಕಿ ಖಗಂ ॥
ಪೋಗಲ್ ಪಡೆಯದೆ ಖಚರಿಯ ।
ಮೋಗವನೀಡಾಡಿ ಪೋದನರಸರಮುಗನಂ ॥೧೩॥

ವ॥ ಈಡಾಡೆ ಬೀಳ್ವ ಬಾಲಭೂಪಾಲಚಂದ್ರನಂ ಪೆರ್ವೊಲೆಯೊಳಾಂತು ಪಿಡಿದು 'ಪುಲಕಮಂ' ಕೀಲಿಸಿಕೊಂಡು ಕುಸುಮಸ್ತಬಕಮಂ ಕುಂಭಸ್ಥಳದೊಳೊಟ್ಟಿಕೊಂಡು ಕಾಮುಕರಿಣಿಯಂತೆ ಪೋಪ ಶಾಲ್ಮಲಿದತ್ತೆಯನೊಂದು ದಿವ್ಯಧ್ವನಿ—

ಎಲೆ ಖಚರಿ ಕುಮಾರಕನಂ ।
ನೆಲಕಿೞಿಪಳಿಪಿಂದಮುಯ್ದಿದಿರು ಬಂದೀಭೂ ।
ತಲಮಂ ತೊೞಲ್ದು ನಿಮ್ಮಯ
ಕುಲಪತಿಯ ಮನೋರಥಕ್ಕೆ ಸಾರಥಿಯಕ್ಕುಂ ॥೧೪॥

ವ॥ ಎನೆ ನಾಲ್ಕುಂ ದೆಸೆಯುಮಂ ನೋಡಿಯಿದು ದೇವತಾವಚನಮಲಂಘ್ಯಮೆಂದು ವಸುದೇವನಂ ವಿದ್ಯಾಧರಿ ಪರ್ಣಲಘುವಿದ್ಯೆಯ ಕೆಯ್ಯೊಳ್

ಪಾ—1. ಪುಲಕದಿಂ.

ಕೊಟ್ಟೊಡದು ಚಂಪಾಪುರದ ಪೊಱವೊೞಲ ಪದ್ಮಷಂಡದ ನಡುವಣ ಪುಳಿನ ತಲದೊಳಿರಿಸಿ ಪೋಗೆ, ಬೞಿಯುಮಿನಿಸಾನುಂ ಬೇಗಕ್ಕೆ ನಿಶಾವಸಾನಮಾಗೆ, ಕೊಳರ್ವಕ್ಕಿಗಳ ಕಳಕಳಕ್ಕೆ ಬೆರ್ಚಿದಂತೆಚ್ಚತ್ತು ಬೆಕ್ಕಸಂಬಟ್ಟದೇನೆಂದು ನಿರವಿಸಿ, ನೀರಜವನದ ರಮಣೀಯತೆಗೆ ಮನಮೊಳದುವರಿಯೆ, ಮಜ್ಜನಂ ಬೊಕ್ಕು ಜಿನಪತಿಯುಂ ಚಿತ್ತಚೈತ್ಯಾಲಯದೊಳಳಂಕಾರನಂ ಕಾಣಲುತ್ಸುಕ ನಾಗಿ, ಮೋಹಮೆಂಬ ಮುಱಿವಸ್ತ್ರಮಂ ಕಳೆದು, ಶುದ್ಧಧ್ಯಾನಮೆಂಬ ಸುಧಾ ಸಾರದಿಂ ಸ್ನಪನಂಗೆಯ್ದು, ಸತ್ಯಸಲಿಲದಿನಾರಾಧಿಸಿ, ಸಹಜಾನಂದಚಂದನದಿನ ಣ್ಪೃಕ್ಕಿ, ನಿರೀಕ್ಷತಾಕ್ಷತೆಗಳಿಂದರ್ಚಿಸಿ, ಗೀತಸಿತವಾಕ್ಪುಷ್ಪದಿಂ ಪೂಜಿಸಿ, ಪರ ಮಭಕ್ತಿಪರಾನ್ನಮಂ ಮುಂದಿಟ್ಟು, ವಿಮಲಜ್ಞಾನಮಣಿದೀಪದಿಂ ನಿವಾಳಿಸಿ, ದಶಧರ್ಮದಶಾಂಗಧೂಪಮಂ ಸಮರ್ಪಿಸಿ ಪುಣ್ಯಫಲನಿಚಯದಿನರ್ಚನೆಗೆ ಯ್ದು, ಕೃತಕೃತ್ಯನಾಗಿ ಕನ್ದೊಱೆದು ಕೆಯ್ಯೆತ್ತಿಕೊಂಡು ಕೊಳದ ತಡಿಯೊಳ್ ಕಾಲ್ಮೊಗದೊಳ್ವ ಮಾನಸರಂ ಸರೋವರಮುಂ ಪಾಯ್ದು ಪೊಱಿಯಾವು ದನೆ: ಕಳಕಳಿಸಿ ನಗುತ್ತುಮವರೀಯುಣ್ಣನಾಗಸದಿನೊಡೆದು ಬಿದ್ದಂತೆ ನುಡಿದ ಪನೆಂದೊಡರಸಂ ಸಿಮ್ಮ ಮಾತು ಮತ್ತಸಿಸದೆಂದು ಹನುಮನ ಮತದಿಂ ದಾಂಟಿ ಸಂಸಾರಮಂ ದಾಂಟಿದಂ ಸಿದ್ಧಾಲಯಮಂ ಕಾಣ್ಬಂತೆ ವಾಸುಪೂಜ್ಯ ಭಟ್ಟಾರಕರ ನಿರ್ವಾಣಭೂಮಿಯೊಳ್ ವಾಸವಾದೇಶದಿಂ ಧನಪತಿ ಸಮೆದ ಚಿತ್ರಚೈತ್ಯಾಲಯಮುಂ ಕಂಡು, ಬಲಗೊಂಡು ಸರ್ವಜ್ಞಬಿಂಬಕಭಿಮುಖ ನಾಗಿ, ಮುಗಿದ ಕೆಯ್ಯಂ ಮಸ್ತಕಕ್ಕೆಯ್ದು -

—ಸ್ತುತಿ—

ಸಂಸ್ಕೃತ ಜಯತ್ಯಮಲತಾವಾಸೋ ವಾಸುಪೂಜ್ಯೋ ಜಿನೇಶ್ವರಃ ।
ಯದ್ಬುದ್ಧಿಕಾಮಿನೀ ಮಧ್ಯೇ ತ್ರಿಲೋಕೀ ತ್ರಿವಲೀಯತೇ ॥

ವ॥ ಎಂದಭಿಷ್ಟುತಿಗೆಯ್ದಲ್ಲಿರ್ದ ಬೋಧಸಿಂಧುಭಟ್ಟಾರಕರಂ ವಂದಿಸಿ ಧರ್ಮಮಂ ಕೇಳ್ದು ವಿದ್ಯಾಧರಲೋಕದಿಂದಿಲ್ಲಿಗೆ ಬಂದ ವೃತ್ತಾಂತಮಂ ಕೇಳ್ದು ಪೊಡೆಮಟ್ಟು ಬಸದಿಯಿಂ ಪೊಱಮಡಲೊಡನೆ—

ಇದು ವಾಣೀಮತ್ತಹಂಸೀಸ್ವನಮಿದು ಮದನಜ್ಯಾಲತಾಶಿಂಜಿತಂ ಮ।
ತ್ತಿದು ನೃತ್ಯದ್ಘಾರತೀನೂಪುರರುತಿಮಿದು ಪುಷ್ಪಾಯುಧಾಮೋದ'ಮುದ್ಯ'॥

ಪಾ—1. ವಿಕಸಿತ. 2. ದು. 3. ಪಾದ್ಯ.

ನ್ಮದಭೃಂಗೀರಂಜಿತಂ ತಾನೆನೆ ನನೆಗಣೆಯಂ ತೋಱಿ ಬಾದಿಂಪುನುಣ್ಪಿಂ |
ದುದಿರ್ಪಂತಾರಾಜಪುತ್ರಶ್ರುತಿಗತಿಥಿಯದೊಂದಾಯ್ತು ವೀಣಾಪ್ರಣಾದಂ ||

ವ|| ಆವೀಣಾರವಂ ಬಂದ ಬಟ್ಟೆವಿಡಿದು ಪೋಗಿ ಬಸದಿಯೆಂಬಸಿಯಳುಟ್ಟೆ ಪಸಿಯ ನೇತ್ರಮನಸಕಳವಂತಿರ್ದುಪವನದ ನಡುವ ಪೂವಿನ ಪುಡಿಯೊಳೊಟ್ಟೆ ಬಿಟ್ಟದಂತಿರ್ದದೊಂದು ಪೊಂಬಸದಿಯ ಮತ್ತವಾರಣದ ಮೇಲೆ--

ಅಳಕಾಸಕ್ತೈಕಹಸ್ತಂ ಪ್ರಿಯಶುಕಪರಿಹಾಸಪ್ರಫುಲ್ಲೈಕಗಂಡ |
ಸ್ಥಳಮಾದಾಶಾರ್ಪಿತಂ ಲಕ್ಷ್ಣಮುಚಿತಸಖೀವಾಗ್ವಿತೀರ್ಣೈಕಕರ್ಣಂ ||
ಕಳವೀಣಾಲಿಂಗಿತೈಕಸ್ತನಮೆಸೆದುದು ಕಾಂತಾಜನಂ ರತ್ನಪೀಠಂ |
ಗಳೊಳೇಕೈಕಾಂಗಲೀಲಾಬಲಮನೆ ರತಿನಾಥಂಗೆ ತೋರ್ಪಂದದಿಂದಂ ||

ವ|| ಮತ್ತಮಾಬಸದಿಯೊಳಗೆ ಬಿದಿ ಬಯ್ತ ಭುವನಭಾಗ್ಯದೇವತೆಯಂತಿರ್ದ ಪದ್ಮಾವತಿಯ ಮುಂದೆ ಚಂದ್ರಬಿಂಬಮುಂ ತುಂಬಿ ಮಾಡಿ ಬಿಸತಂತುಶಿಂಜಿನಿಯುಂ ತಂತಿಮಾಡಿ ಇಕ್ಷುಚಾಪದಂಡಮುಂ ದಂಡಿಗೆಮಾಡಿ ಪಂಚಶರಂಗಳಂ ಸಪ್ತಸ್ವರಂಗಳಂ ಮಾಡಿ ಜಿನಪತಿಯುಮನೆನ್ನ ಗಂಡನೊಳ್ ಪಡೆದು ಕುಡುವುದೆಂದು ದೇವಿಯನಾರಾಧಿಸಿ ಬೀಣೆಯಂ ಬಾಜಿಸುವ ರತಿಯಂತಿರ್ದಳನೊರ್ವಳಂ ಸೌಂದರ್ಯಸುಕುಮಾರಿಯಂ ಕುಮಾರಿಯಂ ಕಂಡು ಆಕೆಯ ವೀಣಾವಾದನವೈದಗ್ಧ್ಯಕೆಗಂ ಸಕಲ ತ್ರಿಭುವನಾತಿಶಯ ರೂಪಾಕೃತಿಗಂ ಕುಮಾರಂ ಮೆಚ್ಚಿ ಮೆಯ್ಮಱೆದು ಕಂಬದ ಮಱೆಯಂ ಸಾರ್ದು ಕೇಳುತ್ತುಮಿರ್ಪುದನಾಕೆಯ ಗುರು ಮನೋಹರನೆಂಬ ಗಂಧರ್ವಾಚಾರ್ಯಂ ಕಂಡು ವಸುದೇವನಂ ದೇವನೆಂದೇ ಬಗೆದು ಕೆಲಕ್ಕೆ ಕರೆದು ಕುಳ್ಳಿರಲ್ಕುಡಿಸಿ ಕುಮಾರನಾಕಾರಮುಂ ನೆರೆಯುಂ ಮಿಳಯುಂ ನೀಡುಂ ಭಾವಿಸಿ ನೋಡಿ --

ಶ್ರೀಯುಂ ತಾಳ್ದಿರ್ದ ವಕ್ಷಂ ಕಿಸುಸೆರೆವರಿದಿರ್ದಕ್ಷಿಯುಗ್ಮಂ ಪಯೋಜ |
ಪ್ರಾಣಂ ತಾಮ್ರಾಧರೋಷ್ಠಂ ವದನಮಿಭಕರಸ್ಪರ್ಧಿಗಳ್ ತೋಳ್ಗಳಂಗ ||
ಯ್ಯಾಯೂರೇಖಾಭಿರಾಮಂ ಕ್ರೊಱಮಡಿ ಮಕರಾಕಾರಮತ್ಯಾಯತಂಗಳ್ |
ದೇಯುಂ ಸಾಮಾನ್ಯನಲ್ಲಂ ತ್ರಿಭುವನಜನತಾಮಾನ್ಯಸೀತಂ ವಿನೀತಂ||೧೩||

ವ|| ಎಂದು ಮನದೊಳ್ ಮಚ್ಚುತ್ತುಮಿರ್ಪನ್ನೆಗಂ ಪನ್ನಗಪೂಜಿತೆ ವೀಣಾವಾದನಪ್ರವೀಣತೆಗೆ ಮೆಚ್ಚಿ ಮನಮೊಸೆದು ಪಸಾಯಮಿತ್ತ ಮಕುಟದ ಮುಕುಳಮನಾ ಕುಮಾರಿ ಮುಡಿಯೊಳಗಿಟ್ಟು ಒಟ್ಟತ್ತಿಗೆ ಪೊಡಮಟ್ಟು ಬಂದುಪಾಧ್ಯಾಯಂಗೆಱಗಿ ದೇವಿಯೆನಗೆಂದುಮೀಯದ ವರಪ್ರಸಾದಮನಿಂದು ಗುರುಚರಣಪ್ರಸಾದದಿನಿತ್ತಳೆಂದು ಪೋಪನ್ನಮುಪಾಧ್ಯಾಯನೀಮಹಾನುಭಾಗನ ಬರವುಮೀದೇವತೆಯ ಬರವುಮೀಯೊಂದುಮದನಗೆಂದು ಸಮನಿಸಿದ ಕಾರಣದಿನೀಕಾರಣಪುರುಷನೀಮರಾಗಂಗನೆಗೆ ವರನಾಗಲ್ವೇಳ್ಕುಮೆಂದು ಮಂದಸ್ಮಿತವದನನಾಗೆ ವಸುದೇವನಿದೀಕುಮಾರಿಯಾರ ಮಗಳಾರ್ಗೆ ಕುಡಲಿರ್ಪಳೀಪರಮೇಶ್ವರಿಯ ಪರಿಜನಮೇಕೆ ಬಾಳಕರನತ್ತಿದಂತೆ ವೀಣೆಯುಂ ಕೊಂಕುಳೊಳ್ ಕೆಕ್ಕೊಂಡಿರ್ಪಳೆಂಬುದುಮೋಜನೆಂದನೀಕೆಗೀಪುರಮನಾಳ್ವಂ ಚಾರುಚರಿತಂ ಚಾರುದತ್ತನೆಂಬ ಪರದನ ಮಗಳೀಮಾಣಿಗೀವೀಣೆಯೊಳ್ ಮಾಣಿಯುಂ ಒಲ್ಲಳ್ ವೀಣಾವಾದನದಿಂ ತನ್ನನಾವಂ ಗೆಲ್ವನಾತನನಲ್ಲದೆ ಮದುವೆಯಾಗೆನೆಂದು ಪ್ರತಿಜ್ಞೆಯುಂ ಮಾಡಿದಳವಳಯ್ಯನುಂ ರಯ್ಯಮಾಗಿ ತಿಂಗಳ್ಗೊಮ್ಮೆ ವೀಣಾಸ್ವಯಂವರಮುಂ ಮಾಳ್ಪನನ್ನರಪ್ಪ ಕಿನ್ನರರುಮಾ ಕನ್ನೆಗೆ ಸೋಲ್ತು *ಕನ್ನೆಗೆ ವಂದರಪಿಯುಂತ ನಿಷ್ಪ್ರಭರಾಗಿ ಪೋಪರಿದು ವಿಪಂಚೀಪ್ರಪಂಚಮನೆ ಕುಮಾರನೊಸೆದು ತನ್ನೊಳಿಂತೆಂದಂ:-

ಪರದರ ಸುತೆಗೆನಿತು ಕಳಾ |
ಪರಿಣತೆಯುಂ ರೂಪುಮಾಗದೆಳಗೊಸಗಿನ ಪೂ || [illegible]
ಮರನಡಿಯೊಳಿರ್ದ ಸಂಪಗೆ |
ಯುರಲಿರ್ಪವೊಲಿರ್ದಳೀಕೆಯಾವನ ಮಗಳೋ ||೧೮||

ವ|| ಎಂದು ಮನದೊಡನೆ ಮಾತಾಡುವ ಕುಮಾರಂಗೆ ನಿನ್ನನುಮಾನಮನಱಿದೆನೆಂದು ಮನೋಹರನೆಂದನೀಪರದನ ಪರಮಮಿತ್ರನಮಿತಗತಿಯೆಂಬಂಬರಚರನಾತನ ಮಗಳೀಕೆ ಗಂಧರ್ವದತ್ತೆಯೆಂಬಳೀಚಾರುದತ್ತನ ಚಾರಿತ್ರಕ್ಕಂ ಚತುರತೆಗಂ ಅಗಲಲಾಱದಮಿತಗತಿ ವಿದ್ಯಾಧರಲೋಕಕ್ಕೊಡಗೊಂಡು ಪೋಗಿ ತನ್ನ ರಾಜ್ಯಮುಂ ಕುಡೆ ಕಡೆಗಣಿಸಿ ಗಂಧರ್ವದತ್ತೆಯ ಗಾಂಧರ್ವಗಂಧಿಯುಪ್ಪ ಕಳಾಕೇಳಿಗಂ ವಲ್ಲಕೀವಲ್ಲಭತೆಗಂ ಜಡಂಗಿಂ ಗೆಡೆ

ಪಾ—1. ಪರದರು.

ಗೊಂಡ ಗಾಡಿಗಂ ಬಯಸಿ ಕೊಳ್ಮಗಳ್ ಕೊಂಡನಿದೀಕೆಯ ವೃತ್ತಕಮೆಂದು ವಸುದೇವನಂ ತನ್ನ ಮನೆಗೊಡಗೊಂಡು ಪೋಗಿ ಮಜ್ಜನಭೋಜನಾದಿಗಳಿಂ ಮನ್ನಿಸಿ ಮನೋಹರಂಗೆ ಮನೋಹರಮಾಗೆ ಮರುದಿವಸಂ ವೀಣಾಸ್ವಯಂಬರಮಾಗೆ ವೀಣೋಪಾಧ್ಯಾಯನೊಡಗೂಡಿ ಸ್ವಯಂವರಮಂಟಪದೊಳ್ ಕುಳ್ಳಿರ್ದನನ್ನೆಗಂ ನೆರೆದ ಕಿನ್ನರ ಕಿಂಪುರುಷಗರುಡಗಂಧರ್ವ ಸಿದ್ಧವಿದ್ಯಾಧರರಂ ವೀಣೆಯೆಂಬ ಕಬ್ಬಿನ ಬಿಲ್ಲನೇಱಿಸುವಂತೆ ಕಳೆಯನೇಱಿಸಿ ಜೇವೊಡೆವಂತೆ ಮಿಡಿದು ನನೆಗಣೆಯಂ ಕೊಳ್ವಂತೆ ಕೋಣಮಂ ಕೊಂಡು ಮುಗಮುಗಿಸುವಂತೆ ಬಾಜಿಸಿ ಮನೋಜವಿಜಯಾಧಿದೇವತೆಯಂತೆ ಗಂಧರ್ವದತ್ತೆ ಸೋಲಿಸೆ ವಸುದೇವಂ ಕಂಡು ಮನೋಹರನನುಮತದಿಂ ಕಳನೇಱುವಂತೆ ವಿದ್ಯಾಪೀಠಮನೇಱಿ ಬೀಣೆಯಂ ಬೇಡುವುದುಮುಪಾಧ್ಯಾಯನೊಳ್ಳಿದುವೆಂದಾಯ್ದು ತಂದಿತ್ತ ಬೀಣೆಯಂ ಮಿಡಿದು ನೋಡಿ ತಂತಿಯೊಳ್ ತನುರೋಮಮಂ ಸೊರೆಯೊಳ್ ಶಲ್ಯಮಂ ಪ್ರವಾಳದೊಳ್ ಪಾಷಾಣಮಂ ತೋಱಿ ಕುಡುವೊಡೆ ನಿರ್ದೋಷಮಪ್ಪ ವೀಣೆಯಂ ಕುಡಿಮೆನೆ ಮನೋಹರನೆಂದನೀಲೋಕದೊಳವಲ್ಲದಿಲ್ಲ ನಿಮ್ಮ ಮೆಚ್ಚುವ ಬೀಣೆಯಾವ ಲೋಕದೊಳುಂಟೆನೆ ವಸುದೇವನೊಂದಾಖ್ಯಾನಮಂ ಪೇೞಲ್ ತಗುಳ್ದನದೆಂತೆನೆ:—

ನುತಹಸ್ತಿನಾಖ್ಯಪುರದಧಿ ।
ಪತಿ ಮೇಘರಥಂಗಮೆಸೆವ ಪದ್ಮಾವತಿಗಂ ॥
ಸುತರಾದರ್ ಜಗತೀವಿ ।
ಶ್ರುತವಿಷ್ಣುಕುಮಾರಪದ್ಮರಥರತಿಸೇವ್ಯರ್ ॥೧೯॥

ವ॥ ಮೇಘರಥಂ ಮೇಘಕ್ಷಣಕ್ಷಣದರ್ಶನದಿಂ ವೈರಾಗ್ಯಪರನಾಗಿ ವಿಷ್ಣುಕುಮಾರಂಬೆರಸು ತಪಂಬಟ್ಟಂ ; ಪೆಱಗೆ ರಾಜ್ಯದೊಳ್ ನಿಂದ ಪದ್ಮರಥನ ಮೇಲೆ ಮಲೆದೆತ್ತಿ ಬಂದ ಪ್ರತ್ಯಂತಭೂಪಾಲರ ಬಲಮಂ ಬಲಿಯೆಂಬ ಮಂತ್ರಿ ಮಂತ್ರಬಲದಿಂ ಬಾರದಂತು ಬಾರಿಸೆ ; ಪದ್ಮರಥಂ ಮೆಚ್ಚಿ ಮೆಚ್ಚಿತ್ತೆಂ ಬೇಡಿಕೊಳ್ಳನೆ ; ಬಲಿ ಜೋಕಾಱನಂತೀರೇೞು ದಿವಸದರಸುತನಮಂ ಬೇಡಿ ಪಡೆದನನ್ನೆಗಮಾಪುರದ ಪೊಱವೊೞಲ ಸೌಮ್ಯಗಿರಿಯೊಳ್ —

ಧೃತಿಯಿಂ ಮತ್ಸರಿಸುವ ಪ |
ರ್ವತಮಂ ತಾನಿಕ್ಕಿ ಮೆಟ್ಟಿದಂತಿರೆ ಯತಿಸಂ ||
ತತಿವೆರಸಕಂಪನಪ್ರತಿ
ಪತಿಯಿರ್ದಂ ಯೋಗಧುರ್ಯನಚಲಿತಧೈರ್ಯಂ ||೨೦||

ವ|| ಅದು ಕಾರಣದಿಂದಕಂಪನಮುನೀಶ್ವರಂಗೆ ಒಲಿಯುಪಸರ್ಗಮಂ ಮಾಳ್ಪ ಮನಮನೆತ್ತಿಕೊಂಡು ಕೋಟಿಹೋಮಮುಮಂ ಬ್ರಾಹ್ಮಣಭೋಜನಮುಮಂ ನಾಮ್ಯಗಿರಿಗುಹಾಗೇಹಂಗಳೊಳ್ ಮಾಡಿದಪನಲ್ಲಿಯಲ್ಲದೊಡೆಯುಂ ಗರಗರಿಕೆಯುಮಿಲ್ಲೆಂದು ಡಂಗುರಮಂ ಪೊಯ್ಸಿ ಬಾಯ ಸಪಿಗೆ ಪಾವರೆಲ್ಲಂ ಪರ್ವತಕ್ಕೆ ಮೂಸೆಯಿಡುವಂತೆ ಸುತ್ತಿ ಮುತ್ತಿ ಬೆಳೆಯುಮ ನಡುಗೆಯುಮಂ ಎಡೆಯುಡುಗದೊಡರಿಸೆ—

ಮುಗಿಲ್ಗಳ್ ಶೃಂಗಮಂ ಮುಸುಱೆ ಮೇವವೊಲುರ್ವಿ ಪೊದಱ್ದುಪರ್ವೆ ಪೆ |
ರ್ಪೊರ್ಗೆ ಭಗಣಂಗಳಂ ಬಳಸಿದಿಂದುವಿನಂತೆ ಮಯೂಖಮಾಲೆಯೋ ||
ಲಗಿಸುವ ಸೂರ್ಯನಂತೆಸೆಯೆ ಸುತ್ತಿರಿದಗ್ನಿ ಭಟಾರನಂತೆ ಯೋ |
ಗಿಗಣಪರೀತನಸ್ಖಲಿತನಿರ್ದನಕಂಪನಯೋಗಿ ಯೋಗದೊಳ್ ||೨೧||

ವ|| ಆಮುನಿಜನೋಪಸರ್ಗಮಂ ಮಾಱ್ಪುದುಗಂಡಿಂತೇಕೆಂದು ವಿಷ್ಣುಕುಮಾರನಱಿದು ಪದ್ಮರಥನಲ್ಲಿಗೆ ಪೋದೊಡಂ ಪೊಡೆವಟ್ಟೊಡಂ ಪರಸದೆ ಪೀತರಾಗಾಸನಮನಿಕ್ಕಿಕೊಂಡು ಕುಳ್ಳಿರದೆ ಕನಲ್ದಿಂತೆಂದಂ:—

ಮಂತ್ರಿ ಮುನಿದೀಮಹಾಮುನಿ |
ಸಂತತಿಗೆ ಮಹೋಪಸರ್ಗಮಂ ಮಾಱ್ಪುದುಗಂ ||
ಡಿಂತೇಕೆಯುಣ್ಣ ಮಂತುವಿ |
ನಂತಿರ್ದಪೆಯರಸನಾದುವರ್ಕಿದು ಫಲಮೇ ||೨೨||

ವ|| ಎನೆ ಪದ್ಮರಥಂ ನಡುಗಿ ಮೂಱುಂ ಲೋಕಮನೆಱಗಿಸುವ ನಿಮ್ಮಡಿಯ ತಪೋರಾಜ್ಯಮೆ ಎಡೆಯ ಕಡೆಯ ಬಡವರುಮನೇನಾಱದೆಮ್ಮ ರಾಜ್ಯಮೇತಱ ರಾಜ್ಯಮಿಂದ್ರೋಪೇಂದ್ರಾದಿಗಳ್ಗಾಸನಕಂಪಂಮಾಳ್ಪ ನಿಮ್ಮಡಿಯ ತಪಸ್ತೇಜದ ಪೊರೆಪೊಳ್ ಮನ್ನೆಯ ಮಂತ್ರಿಯುಮಂ ನಡುಗಿಸಲಾಱದೆಮ್ಮನ್ನರಪ್ಪ ನರಕೀಟಕಂಗಳ್ ತೇಜಮಾದಿತ್ಯನ ತೇಜದ ಪೊರೆಯ

ಮಿಂಬುೞುಪಿನ ತೇಜದಂತಕ್ಕ್ರಮದಲ್ಲದೆಯುಂ ಜೇಗೆ ಪರ್ವಿ ಪರ್ವತಂ
ಗಳ ತಾಪಮಂ ಕಳೆವೊಡಮಾಗದುನ್ನತಂಗಳಪ್ಪ ಜಲಧರಂಗಳ್ ಕಳೆಗಂ
ಕೇಳಿದುವಪ್ಪ ತೊರೆಯುಂ ಬಾವಿಯುಂ ಬಗೆಗೆಯುಂ ಕಳೆಯಲಾಱವೀ
ಮಹಾನುಭಾವರುಪಸರ್ಗಮಂ ಪಿಂಗಿಸುವೊಡೆ ಸಾಮರ್ಥ್ಯವಂತರಪ್ಪ
ನಿಮ್ಮಡಿಗಳ್ ಪಿಂಗಿಸುವರ್ ಮಂದರಪ್ಪಿಮ್ಮವಂಗಿರಿಂದೇನಪ್ಪುದೆನೆ—ವಿಷ್ಣು
ಕುಮಾರನಂತಾದೊಡಾನು ನಿಱುಪಿಸಿದಪೆನೆಂದು ಪೋಗಿ—

ಬಗೆಯೆ ಕವಲ್ತ ಕಾಸೆ ಪೊಸಜನ್ನಿವರಂ ಶಿಖಿ ಕೋವಣಂ ಕರಂ |
ಡಗೆ ಕಿಸುವೊನ್ನ ಬಟ್ಟಗೊಡೆ ಭಾಸುರನಾಮದ ಬೊಟ್ಟು ಕೊಪ್ಪಿನೊಳ್ ||
ನೆಗೆದ ಕುಶಾಂಕುರಂ ಮಿಸುಪ ಮುಂಜಿ ಪಲಾಶದ ದಂಡು ಕುಂಡಳಂ |
ಬಗೆವುಗೆ ಬಂದನಂದು ಬಲಿಯಲ್ಲಿಗೆ ವಾಮನನಾಗಿ ಕಾಮದಂ ||೭೩||

ವ|| ಆಮಾಣಿಕವಂತಪ್ಪ ಮಾಣಿ ಮಂತ್ರಿಯ ಮುಂದೆ ನಿಂದು
ಮಂತ್ರಮಂ ಪೇೞ್ದಕ್ಷತೆಯುಂ ಕೊಟ್ಟು:—

(ಸಂಸ್ಕೃತ) || ಬಲಿನಾ ವಿಷ್ಣುರಯಂ ಕುಯಾರ್ದವಿಲಂಬಂ ಧನಂ ತವ |
ಸಮಾಶ್ಲಿಷ್ಯತಿ ಯತ್ಪಾದಂ ಪದ್ಮಾ ಭಾತ್ಯಾತಪತ್ರಿಷಾ ||

ವ|| ಎಂದುಪಶ್ಲೋಕಿಸಿದ ವಟುವಿನ ವಾಕ್ಪಟುತ್ವಕ್ಕಂ ಬ್ರಹ್ಮವ
ರ್ಚಸ್ಸಕ್ಕಂ ಬೆಕ್ಕಸಂಬಟ್ಟು ಬಲಿ ಬಲವಂದು ಪೊಡೆವಟ್ಟು ಬೇಡಿಮೆನೆ
ವಾಮನನೆಮಗೆ ಕುಳ್ಳಿರ್ದನುಷ್ಠಾನಮಂ ಮಾಡಲ್ತಕ್ಕನಿತನೆಮ್ಮ ಕಾಲ್ತಡಿ
ಯೊಳ್ ಮೂಱಡಿ ನೆಲನನೀವುದೆನೆ ಬಲಿ ಬೆಚ್ಚನೆ ಸುಯ್ದುನಗದೃಪ್ಪಮೆಯ್ದು
ದಿಕ್ಕಂ ಕಿಱಿದಂ ಬೇಡಿದಿರ್ ಕೊಟ್ಟೆನಳೆದುಕೊಳ್ಳಿಮೆನೆ:—

ವಟು ಮರದುದ್ದನಾದನಸಿತಲ್ಲದೊಡತ್ತಲೆಯುದ್ದವಾದನ
ಕ್ಕಟ ಮುದಿಲುದ್ದವಾದನಿವನಾವನೊ ಪೆರ್ಮರದುದ್ದವಾದನಿಂ ||
ತುಟು ಗಿರಿಯುದ್ದವಾದನಿದು ವಿಸ್ಮಯಮಾಮುಗಿಲುದ್ದವಾದನೋ
ವಟವಟುಗಂ ದಿಟಕ್ಕೆನೆ ಕರಂ ಬಳೆದಂ ಮನದಂತೆ ವಾಮನಂ ||೭೪||

ವ|| ಅಂತುಮಲ್ಲದೆ—

ಮರನಂ ಮುಟ್ಟಿದನಿಲ್ಲ ಮೇಘಘಟೆಯೊಳ್ ಕಾಲೂಱಿದನಿಲ್ಲಿಲ್ಲ ಭೂ |
ಧರಮಂ ದಾಂಟಿದನಿಲ್ಲ ಬಾಂದೊರೆಯೊಳಿಟ್ಟಂ ಕಾಲನಿಲ್ಲಿಲ್ಲ ಭಾ ||

ಪಾ—1. ಭಾರಸ—ಭಾಳದ ಎಂದಿದ್ದರೂ ಇರಬಹುದು 2. ಬೆಟ್ಟಿನೊಳ್.
3. ಕಿಳ್ಪಡಿ.

ಸ್ಕರನಂ ಮೂಱಡಿಯ ಮಾಣಿ ಸೇದೊರ್ಡದನೇ ಇಲ್ಲೆಂಬಿನಂ ನೀಡಿದಂ |
ತರದಿಂ ಪಾದಮನುರ್ವಿ ಕೊರ್ವಿ ಬಲಿಯುಂ ಗೆಲ್ವಾಮನಂ ವಾಮನಂ||೨೪||

ಅದೆ ಪೊಸಪೊನ್ನಸತ್ತಿಗೆಯದಲ್ಲದು ರತ್ನಹಟಕ್ಕಿರೀಟಮ |
ಲ್ಲದು ವರವಜ್ರಕುಂಡಳಮದಲ್ಲದು ಕೌಸ್ತುಭರತ್ನಮಂತದ ||
ಲ್ಲದು ಕರಚಕ್ರಮಲ್ಲದದು ನಾಭಿಸರೋಜಮೆನಲ್ ದಿನೇಶಬಿಂ
ಬವ ನೆಲೆ ತಗ್ಗಿತಪ್ಪಿನಮನುಕ್ರಮದಿಂ ಬಳೆದಂ ತ್ರಿವಿಕ್ರಮಂ ||೨೬||

ಇದು ಲೀಲಾಧೃತಭೂಕರೇಣುಕರಮಲ್ತುಘ್ರೋತ್ಪಟೀಕೇತುವ |
ಲ್ತಿದು ಸೂರ್ಯಾಂಬುಜನಾಳಮಲ್ತು ಶಶಿಲೋಕಾದೀಪಿಕಾಸ್ತಂಭಮ ||
ಲ್ತಿದು ತಾರಾಕುಸುಮಾವಳೀವಿಟಪಮಲ್ತು ಭ್ರಾವಸೀಶೇಷಮ |
ಲ್ತಿದೆನಲ್ ತಾಂ ಬಳೆದತ್ತನುಕ್ರಮದಿನಾಪಾದಂ ಪಯೋಜಾಕ್ಷನಾ ||೨೭||

ತರುವಿಂದತ್ತತ್ತ ಸೀಳ್ದಂ ಘನಪಟಲದಿನತ್ತತ್ತ ಮಿಕ್ಕಂ ಹಿಮೋರ್ವೀ |
ಧರದಿಂದತ್ತತ್ತ ಪೋದಂ ರವಿಯ ರಥದಿನತ್ತತ್ತ ಮೆಯ್ವೆರ್ಚಿದಂ ಸು ||
ಟ್ಟುರೆಯಿಂದತ್ತತ್ತಮತ್ತಂ ನಿಮಿರದಿರನಿದೇನೆಂದು ಜಾತಾದ್ಭುತಂ ನೋ |
ಳ್ಪರ ಕಣ್ಣುಂ ಚೇತಮುಂ ಕಾಲ್ಗಿಡೆ ಕಡುಜವದಿಂ ವಿಷ್ಣುವರ್ಧಿಷ್ಣುವಾದಂ||

ವ|| ಅಂತುಮಲ್ಲದೆ

ಬಲಗೊಂಡತ್ತಮರಾದ್ರಿಗೆತ್ತಡೆಯೊಳಾಜ್ಯೋತಿರ್ಗಣಂ ಬಂದಿರುಳ್ |
ತಲೆದೋಱುತ್ತೆಳವಿಂಗಳೊಂದು ದೆಸೆಯೊಳ್ ಕೆಯ್ದಿರ್ಪಿನಂ ತಪ್ತಕಂ ||
ದಳತಂ ಸಂದಣಿಗೊಂಡದೊಂದು ದೆಸೆಯೊಳ್ ಸೂರ್ಯಾತಪಂ ವಿಕ್ರಿಯಾ |
ಬಳದಿಂ ತಾಂ ಬಳೆಯಲ್ಕೆ ಭಂಜಿತಮಹಾಮಂತ್ರಿಕ್ರಮಂ ತ್ರಿಕ್ರಮಂ ||

ರವಿಯುಶ್ವಂ ದೆಸೆವಾಯ್ದು ಪಾಯ್ದುಱುಕುವಿನಂ ತೇರಂ ನಯಂ ಪೆರ್ಚಿ ಪೆ |
ರ್ಚುವಿನಂ ಚಂದ್ರನ ಬೆಳ್ಮುಗಂ ಬೆದಱುದಾತ್ಮಸ್ತ್ರೀಯರಂ ಪೋಱ್ ಪಾ ||
ಱುವಿನಂ ತಾಂ ಪೊಲಗೆಟ್ಟು ಖೇಚರಚಯಂ ದಿಕ್ಪಾಲಕರ್ ಭೋಂಕೆನಂ |
ಜುವಿನಂ ವಿಷ್ಣುಕುಮಾರನೇಂ ಬಳೆದನೋ ಬ್ರಹ್ಮಾಂಡಮಂ ತಾಪಿನಂ ||

ಕಾವಟುವಿಂಗೆ ಮಿಂಚುವೆಳಮಿಂಚಿನ ಪಾರಿದಲೀಪೆ ಮೌಂಜಿಯುಂ |
ಕೋವಣಮಾಯ್ತು ಮುಟ್ಟೆ ರವಿಗರ್ಘ್ಯಮನೀವ ಪೊಡರ್ಪು
[ಮಾಯ್ದ ಮಾ ||

ಯಾವಿಗನೊಲ್ದು ಗುಂಡಿಗೆಯಿನಾಗಸಗಂಗೆಯ ದಿವ್ಯತೋಯಮಂ ।
ತೀವುವ ಬುದ್ಧಿಯೊಳ್ ಬಗೆದನಕ್ಕಟ ವಾಮನವಪ್ರಮಾಣಮಂ ॥ ೩೧ ॥

ಇಂತಪ್ಪ ಸಿತಗಸೀವಟು ।
ವಿಂತಪ್ಪತಿವರ್ತಿ ಮಾಣಿಯುಂ ಕೋಡಗಮುಂ ॥
ಸಂತಮುಡಲಾರ್ಕುಮೇ ರವಿ ।
ಯಿಂತಪ್ಪನ ಪರಿವ ಘಂಟಿಯೊಳ್ ಕಾಲ್ಗೋದಂ ॥ ೩೨ ॥

ಅಂಬರತಳಕ್ಕೆ ಬಳೆದು ತ್ರಿ ।
ವಿಂಬೊಳೆವಚ್ಯುತನ ಚರಣದಂಡಂ ನಕ್ಷ ॥
ತ್ರಂಬಳಸಿ ದೀಪಮಾಲೆಯ ।
ಕಂಬದವೋಲ್ ತೊಳಗಿ ಬೆಳಗುತಿರ್ದತ್ತಾಗಳ್ ॥ ೩೩ ॥

ಬಲಿಹರನ ಚರಣದಂಡದ
ತಲೆಯೊಳ್ ಕಿಱುಗೊಂಡೆಱಲ್ವ ಬಾಂದೊಱೆಯುಲರಿಂ ॥
ದೊಲೆದುದು ವಿಷ್ಣುಕುಮಾರನ ।
ಗೆಲಮಂ ಕಂಡಮರರೊಸೆದು ಕಟ್ಟಿದ ಗುಡಿವೋಲ್ ॥ ೩೪ ॥

ವಾಮನಪದಹತಿವಿದಳಿತ
ಜೀಮೂತವಿಮುಕ್ತಬಹಳಜಲಧಾರೆಗಳಿಂ ॥
ದಾಮುನಿಜನಾಪಕಾರಕ ।
ಧೂಮಧ್ವಜನೆಯ್ದೆ ನಂದಿ ಪೋದತ್ತಾಗಳ್ ॥ ೩೫ ॥

ವ॥ ಅಂತಾಮಹಾಮುನಿಜನೋಪಸರ್ಗಮಂ ಮಾಣಿಸಲೆಂದು ವೈಕುರ್ವಣಬುದ್ಧಿಯಿಂ ಬ್ರಹ್ಮಾಂಡಮನೊದೆದು ಬಳೆದಾತ್ರಿವಿಕ್ರಮನುತ್ಕ್ರಮಾಂಗುಷ್ಠಘಾತದಿಂ ತ್ರಿದಿವಮುದಿರ್ಗುಮೆಂಬ ಭಯಮಾಗೆ ಬಲವಿರೋಧಿ ಬೆಸಸಿದ ಗಂಧರ್ವದೇವರ್ ಬಂದು ಗಾಂಧಾರಗ್ರಾಮಮನಾಳಾಪಿಸಲೆಂದು ಧಾರಾವಿಯುಂ ಸಾರಿರಿಯುಮೆಂಬೆರಡುಂ ಬೀಣೆಗಳುಮನಳವಡಿಸಿ

ಕಳೆಯಂ ಪತ್ತಿಸಿ ಜೇವೆಯಂ ಸೀಳ್ಸಿ ಮೆಲ್ಪಿಂ ತಂತಿಯಂ ತೀಡಿ ಕಾ ।
ಕಳಯೊಳ್ ಬೀಣೆಯನಾಗುಮಾಡಿ ಮಿಡಿಯುತ್ತಾಳರ್ದ ಸುಸ್ವರ ।

ಕ್ಕಳಿ ಪೂವಂ ಗಿಳಿ ಪಣ್ಣನಾಲಿಸಿ ಲಸಚ್ಚೂತಾಂಕುರಾಸ್ವಾದಮಂ ।
ಕಳಕಂಠಂ ಬಿಡೆ ದೇವರಾಲಪಿಸಿದರ್ ತ್ರಿಸ್ಥಾನಸಂಶುದ್ಧಿಯಿಂ ॥೩೬॥

ವ॥ ಆಗಂಧರ್ವವಾದನಕ್ಕೆ ವಿಷ್ಣುಕುಮಾರನತಿಪ್ರಸನ್ನನಾಗಿ ನಿಜೋದ್ರೇಕಮುಮಂ ವೈಕುರ್ವಣಮುಮನುಪಸಂಹರಿಸಿ ಬಲಿಯಂ ಬಂಧನದೆ ಳರಿಸಿದನಾವೀಣೆಯ ವಂಶದ ವೀಣೆಯುಂಟಕ್ಕುಮದಂ ತಪ್ಪೊಡೆ ತನ್ನಿಮೆಂದ ವಸುದೇವನ ವಿಪಂಚೀಪ್ರಪಂಚವಾಚಾಕ್ವಣಿತಕಾರಕ್ಕಮತಿಮನೋಹರಾಕಾರಕ್ಕಮತ್ಯಂತಾಸಕ್ತೆಯಾ -

ಅತಿಮುಗ್ಧಾಪಾಂಗಭೃಂಗಂ ಮುಖಸರಸಿಜದೊಳ್ ತನ್ನ ಬಾಹಾ [ಭುಜಂಗಂ ।
ಸುತನುಶ್ರೀಖಂಡಶಾಖಾಗ್ರದೊಳಧರಲಸದ್ವಿದ್ರುಮಂ ದಂತಮುಕ್ತಾ ॥
ತತಿಯೊಳ್ ಪಾಣಿಪ್ರವಾಳಂ ಕುಚಕಲಶದೊಳಂದಾಗೆ ತದ್ದರ್ಪಸಿಂದ್ರ ।
ಪ್ರತಿಮಂ ಗಾಂಧರ್ವದತ್ತಾಮೃದುಹೃದಯದೊಳಾರೂಪಕಂದರ್ಪದೇವಂ ॥

ವ॥ ಇರ್ದೊಂದು ದೆವಸಂ ವಸುದೇವಕುಮಾರಂ ವಿದ್ಯಾಮಂಡನಮಂಡನೀಭೂತಜಗತ್ತ್ಯಾಗಸಿಂಹಾಸನದೊಳ್ ಸಿಂಹಕಟೀತಟಮನುಪಮೆಗೆ ತರ್ಪಂತುಪವೇಷದನಳಂಕರಿಸಿಪ್ಪುದುಮಾಪ್ರಸ್ತಾವದೊಳ್ ಕುಂಕುಮಮುಂ ಕುಚಕಳಸನುಮೆಂಬರಿರ್ವರಕ್ಕರಿಗರ್ ಬಂದು ಶುಭೋದಯಮೆಂದು—

॥ ಸಂಸ್ಕೃತ ॥

ಕೀರ್ತಾವಾಜತಿ ಸೆಜ್ಜೆವಳ್ಳಸಚಿವಶ್ರೀಪದ್ಮನಾಭಪ್ರಭಾ ।
ತ್ರೈಲೋಕ್ಯಾಶ್ವಪತೇ ವಿಜೇಯ ಸುಚಿರಂ ಪೃಷ್ಟ್ಯಾಸಪೀಭಿಸ್ಫುಟಂ ॥
ಕಸ್ತೂರೀತಿಲಕೇನ ಲಕ್ಷ್ಮಣಕೃತೀ ಚಂದ್ರಸ್ಸಲಕ್ಷ್ಮಾಭ್ರಭತೇ ।
ಕಂಠೇ ಕಾಳಯತಿ ಪ್ರಸಿದ್ಧಮಗಮತ್ ಶೇಷೋಪಿ ಭೂಷೋಪಿ ಚ ॥

॥ ಪ್ರಾಕೃತ ॥

ಸಿರಿಯ ಸರಸಿಯ ಸಯಿಯ ಪರಲಂ । ತಿಯವಚ್ಛಾವ ಮುಕುಮಿಹ ಭಯದಂಡೋ ॥ ಸಂಜೀವಾಯ ಜೇಣಾಸಂಜಾಜ್ಜೈಪಟುಮಹಣಾವ್ವೋ । ವೀರಬಲ್ಲಾಳದೇವಂ ಪುತಿಯ ಪುಮಪಿಣಾಹೋ ಸಂಜಳೋ ಸೆಜ್ಜೆವಳ್ಳೋ ॥ ? ॥೩೯॥

ವ|| ಎಂದೋದಿದ ಭಟ್ಟರ್ಗೆ ತುಡಲಾರ್ಪನಿತು ಮಣಿಭೂಷಣಂಗಳ ನುಡಲಾರ್ಪನಿತು ಪಟ್ಟಾಂಬರಂಗಳಂ ಮೊಟ್ಟೆಗಟ್ಟಿ ಪೊತ್ತುಕೊಂಡು ಪೋಗಲಾರ್ಪನಿತು ಪೊನ್ನುಮನಿತ್ತು ನೀಮೆತ್ತಣಿಂ ಬಂದಿರೆಲ್ಲಿಗೆ ಪೋದಪಿರೆಂಬುದುಂ ಕುಚಕಲಶನೆಂದಂ:—ವಂಶವಿಷಯದೊಳ್ ಮಾಗಧಿಯೆಂಬ ಪೊೞಲನಾಳ್ವ ರಕ್ತಾಕ್ಷನೆಂಬರಸಂಗಂ ಸುಮಿತ್ರೆಯೆಂಬರಸಿಗಂ ರೋಹಿಣಿಯೆಂಬ ಮಗಳಾದಳ್ | ಆ ತ್ರಿಭುವನಸೌಂದರ್ಯಸಂಕೇತಭೂಮಿಯಪ್ಪ ಭಾಮಿನಿಯ ಶೃಂಗಾರಸ್ವಯಂವರಕ್ಕೆ ಜರಾಸಂಧ ಚಕ್ರವರ್ತಿಯುಂ ಸಮುದ್ರವಿಜಯಂ ಮೊದಲಾದ ಮಂಡಳಿಕರುಂ ನೆರೆದರ್ | ಇವರಂ ಬೇಡುವೆವೆಂಬ ಬಗೆಯಿಂ ಬಂದೊಂ | ನಿನ್ನೀಭವನಕ್ಕೆ ನಾವಾರುಮಂ ಬೇಡದಂತುಂ ಬೇಡಿದನಿತನಾವೆ ಕುಡುವಂತುಂ ಕೊಟ್ಟೆ | ನೀನೆ ಮಾನಿಯೆಂದು ಪೊಗೞ್ದು ಪೋದರ್ | ಇತ್ತ ವಸುದೇವನಾಪೊೞ್ತು ಪೊೞ್ತಾಗಿ ಪರ್ಣಲಘುವಿದ್ಯೆಯಿಂ ಸುಪರ್ಣನಿಂ ಬೇಗವಾಗಿ ಮಾಗಧಿಗೆ ಪೋಗಿ ಪ್ರಾಕೃತಕಾವ್ಯದಂತೆ ಸಹಜಸೌಭಾಗ್ಯಭಂಗಿಭಾವಾಲಂಕಾರದಿನಲಂಕೃತನಾಗಿ ಸ್ವಯಂವರಮಂಟಪಮಂ ಪುಗುವುದುಂ | ಆಗಳಾಸ್ವಯಂವರಸಭೆಯಾಗ ವಾದಕಸಂಪ್ರದಾಯದೊಳ್ ಒರ್ವ ಪಾಣವಿಕನ ಪೆಗಲ ಪಣವಮಂ ತನ್ನ ಪೆಗಲೊಳ್ ತಗುಳ್ಚಿಕೊಂಡು ಮೂಱುಂ ತೆಱದ ಲಯದೊಳಮನಿತೆ ಜತಿಯೊಳಂ ವಿವಿಧವಾದ್ಯವಿಧಿಯೊಳಂ ಮಧುರಾತಿಮಧುರಮಂ ಚಿತ್ರಾತಿಚಿತ್ರಮುಮಾಗೆ ಬಾಜಿಸುವ ವಾದ್ಯವಿದ್ಯಾಧರನ ವಾದನವೈದಗ್ಧ್ಯಗಂ ಮರುಳ್ಗೊಂಡು ಗಂಡಗಾಡಿ ಗಂಡುವೆಟ್ಟುಂಗೊಂಡು ಸ್ವಯಂವರಸಂಭ್ರಮಮುಂ ರಾಜಪುತ್ರಿಯ ಕೈಗೆ ಮಾಲೆಯೊಂದು ಬಂದ ಭರಮಂ ಮೆಱೆದು ನೆರೆದ ರಾಜಲೋಕಮೆಲ್ಲಂ ರಾಜಸುತೆಯನೀಡಾಡಿ ಬಂದು ದೊಮ್ಮಳಿಸಿ ಮಮ್ಮಱಂಗೊಂಡು ನೋಡುತ್ತುಮಿರ್ಪುದುಮಲ್ಲಿಗೆ ಕಾತರಚಿತ್ತೆಯಾಗಿ ಕಿವಿಯೆಳ್ದುವರಿಯೆ ಕೇಳ್ದು ಮನವೆಳದುವರಿಯೆ ಬಂದು ಕಣ್ಣೆಳದುವರಿಯೆ ನೋಡಿ—

ಪಾಡುವ ಗೀತಮಂ ಜತಿಗಳಂ ಶ್ರುತಿ ಸೂಡೆ ವಿಲಾಸಲಕ್ಷ್ಮಿಯಂ |
ಸೂಡೆ ವಿಲೋಚನೋತ್ಪಲದಳಂ ಪುಳಕಾಂಕುರಸಂಕುಳಂಗಳಂ ||
ಸೂಡೆ ನಿಜಾಂಗವಲ್ಲಿ ಮನಮುತ್ಸವದಿಂ ಕುಸುಮಾಸ್ತ್ರಮಾಲೆಯಂ |
ಸೂಡೆ ವಿರೋಧಿರಾಜಕುಳರಾಹುಗೆ ರೋಹಿಣಿ ಮಾಲೆ ಸೂಡಿದಳ್ ||೪೦||

ವ|| ಸೂಡಲೊಡನೆ ರಾಜಕುಮಾರರ ಮನದೊಳ್ ಸೂಡೆರ್ದಂತಾಗೆ ಚಕ್ರವರ್ತಿಗಂ ಮಂಡಳಿಕರ್ಗಂ ಕುಡಲಿರ್ದ ಕೂಸಂ ದೇಸಿಗಂ ಕೊಂಡನಿದೇನೆಂದು ಮಾಮಸಕಂ ಮಸಗಿ ಮುಳಿದು ಬಾಲಭಾಸ್ಕರನ ಮೇಲೆ ದೊಡ್ಡಿತಪ್ಪ ತಮದೊಡ್ಡು ಕವಿವಂತೆ ಕಿಶೋರಕೇಸರಿಯ ಮೇಲೆ ದಂತಾವಳದೊಡ್ಡು ಕವಿದು ಮುಸುಱಿ ಮುತ್ತುವಂತೆ ವಸುದೇವನ ಮೇಲೆ ರಾಜಕುಮಾರರೊಡ್ಡು ಕವಿದು ಮುಸುಱಿ ಮುತ್ತಿದಾಗಳ್—

ಕಿವಿ ಕೋಲಂ ಕೋಟಿಯುಂ ಕಾಱಿದಪುವೊ ಬೆರಲಿಂ ಬಾಣಮಂಭೋರೆ
[ನಿಂದ |
ಪುವೊ ಚಂಚನ್ಮೌರ್ವಿ ಜುಮ್ಮೆಂದುಗುಳ್ದಪುದೊ ಶರಶ್ರೇಣಿಯಂ ಮಾಣ
[ದೆಂಬಂ ||
ತೆವೊಲಡ್ಡಂ ಕಾಯ್ಪಿನಿಂದಂ ಕವಿಯೆ ಜವಕೆ ಕೆಯ್ವೊಯ್ಯುದ್ವಾಯ್ದಂಬ
[ನಂಬ |
ಟ್ಟುವವೊಲ್ ಪುಂಖಾನುಪುಂಖಂವೊಳ್ ಕಲಿಸಮನೋವೇಗದಿಂ ಬೇಗಮೊಟ್ಟಂ

ನೀಡಿದ ನಾಲಗೆಯಂತಿರೆ |
ಪೂಡಿದ ಕಣೆ ಕುಣಿದು ತೆಗೆದ ಕುಮಾರನ ಬಿಲ್ಲೊಳ್ ||
ಮೂಡಿದುದು ನುಂಗಲಹಿತರ
ಪಾಡಿಗಳಂ ಮಸಗಿ ಮಿಳ್ತು ಬಾಯ್ದೆಱೆದ ತೆಱಂ ||೪೨||

ಅಲಗುವೊಡೆ ಪರಿದ ಬಿಸಿಲವೊ |
ಲಲಗಲಗನೊಳೊಱಸಿ ಪುಟ್ಟಿದುರಿ ಸುರಿದುವು ಕ ||
ತ್ತಲಿಸಿದುದು ದೆಸೆ ದಿನೇಶಂ
ಪೊಲೆಗೆಲ್ಲಂ ಮಸಗಿ ಮಿಸುಕದೆಸೆ ವಸುದೇವಂ ||೪೩||

ಮಱುಮಂಬಿಯುಲರ್ದ ಸಂಪಗೆ |
ಗೆಱಗದವೊಲ್ ತಪ್ಪಿ ಪಾಱಿದುವು ಪಿರಿಯಣ್ಣಂ ||
ಪೊಱಮುಯ್ವುವರಂ ತೆಗೆದೆ
ಚ್ಚಱಿಕೆಯ ಪೊಸಗಱಿಯ ಕಣೆಗಳವಸವರಜನಂ ||೪೪||

ಅದಟರನೊಂದೆ ಶಾತಶರದಿಂ ತುರಗಂಗಳನೊಂದೆ ಬಾಣದಿಂ |
ಮದಗಜದೊಡ್ಡನೊಂದೆ ಕಣೆಯಿಂದೆ ನಿವಾರಿಸೆ ಪೊರ್ದೆ ಪಾದಪ ||

ದ್ಮದ ಮೊದಲೊಳ್ ನಿಜಾಗ್ರಜನನೆೞ್ಚ ಶಿಲೀಮುಖಮಾಗಳಂಬು ತ |
ಪ್ಪಿದೊಡಭಿವಾದೆಯೆಂಬ ತೆಱದಿಂ ಪೊಡೆವಟ್ಟನಪಾರಪೌರುಷಂ ॥ ೪೫ ॥

ವ॥ ಪೊಡೆವಡುವುದುಂ ನಿರವಿಸಿ ವಸುದೇವನೆಂದಱಿದು—

ಕೆಯ್ತ್ತಪ್ಪುದುದು ಕಾದಲೊರ್ವನೆ ಸಮಗ್ರಾನೀಕದೊಳ್ ಕೋದುಕೋ |
ಲ್ವಾಯ್ದಂ ಬಾಳ್ಕನೊಕ್ಕ ತುಪ್ಪಮುಡುಗಲ್ಕೇಂ ಬರ್ಕುಮೋ ಗಂಟಲಂ ॥
ಕೊಯ್ದಂ ಕೈತವದಿಂದಮೆಂದೊಗೆದ ನೋವಂ ಸಂತಸಂ ನೂಂಕೆ ಮೋ |
ಲ್ವಾಯ್ದಿಂದ್ರೇಭಸಮಂ ಸಮುದ್ರವಿಜಯಂ ತಳ್ಕಯ್ಸಿದಂ ತಮ್ಮನಂ ॥ ೪೬ ॥

ಮಿಸಿಸೆ ಸುಖದಶ್ರು ಪುಳಕಂ
ಪಸರಿಸೆ ಬಿಲ್ಲೊಂದು ಜಾವಮಪ್ಪಿನಂ ಪಸವ್ರೋ ॥
ಡೆ ಸಮುದ್ರವಿಜಯನಪ್ಪಿರೆ |
ವಸುದೇವನುಮಪ್ಪಿಕೊಂಡು ತೋಱಿದನಳವಂ ॥ ೪೭ ॥

ವ॥ ಬೞಿಯಂ ಬಳಮುಖ್ಯರಪ್ಪ ಜರಾಸಂಧನಂಗಮಗ್ರಜನ ಬೆಸದಿ ನೆಱಗಿ ಮಱುದಿವಸಂ ಸೊಯಂಬರಕ್ಕೆ ನೆರೆದರಸುಮಕ್ಕಳೆಲ್ಲಂ ನಿಬ್ಬಣಿಗರಾಗೆ ರೋಹಿಣಿಯೊಳ್ ಮದುವೆನಿಂದು ಮಗುೞ್ದು ಸೂರ್ಯಪುರಕ್ಕೆ ಪೋಗಿ ಸುಖಸಂಕಥಾವಿನೋದದಿಂದಿರ್ದ ನಾಮಹಾನುಭಾಗನ ಸೌಭಾಗ್ಯಸಂಭೋಗಮಂ ಪೇೞ್ವೊಡೆ—

ಬರೆ ಭರದಿಂದೆ ನಿಬ್ಬಣಕೆ ಚಿತ್ತಜನುಂ ರತಿಯುಂ ವಸಂತನುಂ |
ವರವನಲಕ್ಷ್ಮಿಯುಂ ಶಶಿಯುಮಾತನ ರೋಹಿಣಿಯುಂ ಶಿರೀಷಮುಂ
ಸುರಭಿಯುಮಾಮ್ರಮುಂ ಮಿಸುಪ ಮಲ್ಲಿಗೆಯುಂ ವಸುದೇವನಾಳ್ದನೀ |
ಧರೆ ಪೊಗೞ್ವ ಷೋಡಶಸಹಸ್ರವಿವಾಹಮಹೋತ್ಸವಂಗಳಂ ॥ ೪೮ ॥

ಗುಣನಿಧಿಯುದಯಿಸಿದಂ ರೋ |
ಹಿಣಿಗಂ ವಿಧುವಿಂಗಮುದಯಿಪಂತೆ ಬುಧಂ ರೋ ॥
ಹಿಣಿಗಂ ವಸುದೇವಂಗಂ |
ರಣರಸಿಕಂ ಪ್ರಬಲನತಿಬಲಂ ಬಲದೇವಂ ೪೯ ॥

ವ॥ ಅಂದಾಸ್ವಯಂವರದೊಳ್ ತನ್ನ ಬಲ್ಲ ಬಿಲ್ಲ ಬಿನ್ನಣಂಗಂಡು ಬಂಟರಾಗಿ ಬೞಿಸಂದು ಬೆಸಕೆಯ್ವ ಬೇಡಿಕೊಳ್ವ ರಾಜಕುಮಾರರ್ಗೆ

ಬಿಲ್ಲ ವಿದ್ಯೆಯಂ ಕಲಿಸುತಿರ್ಪ ವಸುದೇವನಲ್ಲಿಗೆ—

ಸುಡುದಲೆ ಬಿಟ್ಟ ಕಣ್ ಕಲಿಮೊಗಂ ಕಡಿಗೊಂಡುಡೆ ಬೆಟ್ಟಿತಪ್ಪ ಕೈ |
ಯೊಡಿದು ಪೊರಳ್ಚಿ ಮಾಡಿದವೊಲಿಪ್ಪೊಡಲೊಪ್ಪುವ ರೂಪು ತುಪ್ಪಮಂ ||
ತೊಡೆದವೊಲಪ್ಪ ಮೀಸೆ ಮಿಸುಗುತ್ತಿರೆ ಬಂದನದೊರ್ವನಂದು ಬಿ |
ಲ್ವಿಡಿದು ಯುವಾನನಲ್ಲಿಗೆ ನವೀನನವೀರನದೋತ್ಕಟಂ ಭಟಂ ||೫೦||

ವ|| ಬಂದು ವಸುದೇವಂಗೆ ತುೞಿಲ್ಗೆಯ್ವುದುಮರಸನೆತ್ತಣಿಂ ಬಂದೆ
ಯೆತ್ತಪೋದಪೆ ನಿನ್ನ ಪೆಸರೇನೆಂಬುದುಂ ಭಟನಿಂತೆಂದಂ:—

ಜನನಾಥಾ ನಿತ್ಯಚಂದ್ರೋದಯಧರಣಿಪತೀ ನಾಡುನಾಡಂ ತೊೞಲ್ದಂ |
ಧನುವಂ ಕಲ್ವರ್ಥಿಯಿಂ ಬಿಲ್ಲಜನನಱಸಿ ಬಿಲ್ವಲ್ಮೆಯೊಳ್ ದೇವ ನೀಂ ದೇ
ವನೆಯಾನುಂ ಚಟ್ಟನಾಗಲ್ ನಿನಗೆ ಬಗೆದೆಯುಕ್ಕಂ ದ್ವಿಷಧ್ವಂಸನೆಂ ಕಂ |
ಸನೆನೆಂಬೆಂ ನಿನ್ನ ವಿಖ್ಯಾತಿಯನಖಿಳದಿಶಾಚಕ್ರದೊಳ್ ಕೇಳ್ದು ಬಂದೆಂ ||

ವ|| ಎನೆ ಕೈಕೊಂಡು ಕೋದಂಡವಿದ್ಯೆಯಂ ಕಲಿಸುತ್ತಮಿರೆ ಕಂ
ಸಂ ವಸುದೇವಂಗೆ ಚಟ್ಟನಾಗಿ ಮಿಕ್ಕ ಚಾಪಾಚಾರ್ಯರ್ಗೊರ್ವಜನಾಗಿ
ಧನುರ್ವಿದ್ಯೆಯಂ ಸಾಧಿಸುತ್ತಮಿರ್ದನನ್ನೆಗಂ:—

ಪೌದನಪುರವನಿತೆಗೆ ಸ |
ಮ್ಮೋದನಗಶ್ರೀನಿತಂಬ ಕಳಕಾಂಚಿಗೆ ತಾ ||
ನಾದನಭಿನವಪಯೋಧರ
ನಾದಂ ಪತಿ ತಾಳಹಸ್ತನೆಂಬನಳುಂಬಂ || ||೫೧||

ಅವನೊರ್ವಂ ಪಿಡಿದು ಕಂಠೀ |
ರವಪೋತಮನೊತ್ತು ಪೊರೆದು ಪಿಱಿದಪ್ಪುದುಮೇ ||
ಱುವನಾಗಿ ಪರಿಯುತಿರ್ದಂ |
ಭುವನದೊಳಾತಂಗೆ ಸಿಂಹರಥನೆಂಬ ಪೆಸರ್ || ||೫೨||

ಕುಱಿಯ ಕಡಿಯಣಕೆ ಬಾಯಂ |
ತೆಱೆಯದಿರಿಂ ಬಾಯ ಕರುಳ ಕಡಿಯಣವಾಯ್ತಂ ||
ದುಱದೆ ನೃಪಸಿಂಹನೇಱಲ್ |
ಮಱುಗುವನೇಱನೆ ಕಡಂಗಿ ಸಿಂಹಮನಾತಂ ||೫೩||

ಕರಿಯುಂ ಸಂಕ್ರಂದನಂ ಮೇಷಮನಸಿತಪದಂ ಕೋಣನಂ ಕಾಳನಾಳಂ ।
ಕರಸಾದಂ ಯಾದವ್ರೋದಂ ವರುಣನೆರಲೆಯುಂ ವಾಯು ಪೆಱಂ ಕುಬೇರಂ ॥
ಪಿರಿಯೆಱ್ತಂ ರುದ್ರನಾರ್ದೀಱಿಯುಮೊದವಿದಪರ್ ದೇವರೆಂದೆನ್ನವ್ರೊಲ್ ಕೇ
ಸರಿಯುಂ ಪಾಯ್ದೀಱಿಪಂತೆಂದೊಡರ್ವರೊ ಜಡರೆಂದೇಱಿಪಂ ತಾಳಹಸ್ತಂ ॥

ಹರನೆಱ್ತಂ ಯಕ್ಷನೇಱಂ ಪವನನೆರಲೆಯುಂ ಸಾಗರಾವಾಸನಂಭ ।
ಶ್ವರಮುಂ ನೈಋತ್ಯನಾಳಂ ಯಮುನೆ ಮಹಿಷಮುಂ ವಹ್ನಿಯಾಮೇಷಮುಂ ಕೊ
ಕ್ಕರಿಕುಂ ಸಂಗ್ರಾಮದೊಳ್ ಮನ್ಮೃಗಪತಿಯುಗುರಂತಾಗಲಿಂದ್ರೇಭಕುಂಭಂ
ಬಿರಿವನ್ನಂ ಪೊಯ್ಗುಮೆಂದೇ ಗಜಱುವನೊ ಸಿಜಾಸ್ಥಾನದೊಳ್ ತಾಳಹಸ್ತಂ ॥

ಉಕ್ಕಿಟ್ಟುದಕ್ಕೆನೆಂಬವ
ನುಕ್ಕಂ ತಾಂ ಬಿಟ್ಟನಾಗ ಸಿಂಹಮನೇಱಲ್

. . . . . . . . . . . . . . . . . . . . . . . .

. . . . . . . . . . . . . . . . . . . . . . . . . . . . . . . . . . . . ॥೫೭॥

. . . . . . . . . . . . . . . . . . . . . . . . . . .

. . . . . . . . . . . . . . . . . . . . . . . . . . . . . . . . . . . .

ಕೊಟ್ಟನಾವಿರೆ ಗಜಾರಿಯ ।
ಮುಟ್ಟಂ ಬೆನ್ನೇಱುವರ್ಗೆಯೆಂಟೆರ್ದೆಯುಂಟೇ ॥ ॥೫೮॥
ನಾಡೊಳಗೆ ಮೀಸೆದೆಱೆಯುಂ ।
ಬೇಡಿಸುವಂ ಬೀರರರಸಿಯುರವೆಸರಿಂ ಕೂ ॥
ಸಾಡಿಸಲೀಯುಂ ಹುಲ್ಲಿ ।
ಯಾಡಿಸುವಂ ತೇಜದುರಿಯಿನರಮೀಸೆಗಳಂ ॥೫೯॥

ವ॥ ಎಂಬಗುರ್ವಿನ ಗರ್ವಸಿಂಹರಥನಾಂ ಜೀವಿಸುತ್ತಮಿರೆ ಮತ್ತೊರ್ವನ ನೆತ್ತಿಯೊಳ್ ಸತ್ತಿಗೆಯುಂ ಕೆಯ್ಯೊಳ್ ಕೈದುವುಂಟೆಂಬುದೆ ಮದೀಯರಾಜವೃತ್ತಿಗಂ ವೀರವೃತ್ತಿಗಂ ಭಂಗಮೆಂದು ಸಿಂಹದ ಸಹಾಯಬಲಮುಂ ಕೂರ್ಪುವಡೆದ ಕೈದುವಿನ ಬಲಮುಂ ಮುಪ್ಪುರಿಗೂಡಿದಂತಾಗೆ ಮೇಗೆ ಮೆಯ್ಯಱಿಯದೆ—

ಬಿಡುವೆಸರ ಚಕ್ರಿಯುಪ್ಪೊಡೆ
ಮಡಕೆಗಳಂ ಮಾಡಿ ಕಳಪುಗಲ್ಲದೊಡೀಗಳ್ ||
ಮಡಕೆಗೆಡೆಮಾಡಿ ಕೊಳ್ಗಂ
ದಡದುರ್ಗ ಜರಾಸಂಧಚಕ್ರಿಗಾತಂ ದೂತಂ ||೬೦||

ವ|| ಅಟ್ಟುವುದುಂ ಪೋಗಿ ಮಟ್ಟಸುರಂಪುಸಗಿ ವಿಾಸೆಯಂ ಕಡಿದು ಕಿಡಿವೋಗಿ ಕಡೆಗಣ್ಣ ಕೋಪದುರಿ ಪೊತ್ತಿ ಪರಕಲಿಸಿ ಪರ್ವಿದಂತೆ ತಳತ್ತಳಿಸುವ ಚಕ್ರವರ್ತಿಯು ಕೆಯ್ಯಂ ನೀಡುವುದುಮಾತನಿಂತೆಂದಂ:—

ಖಳನಂ ಗೆಲ್ವುದೆ ಭಂಗಂ |
ಕೆಳೆಗೊಳ್ವುದೆ ಕಷ್ಟಮವನೊಳಾಗದು ಪಗೆಯುಂ ||
ಕೆಳೆಯುಂ ಕರಮಱಿಯನೆ ನೀಂ |
ಮುಳಿವನ್ನಂ ನೃಪತಿಪ್ರಾಳಮಣಿರಂಜಿತಪದಾ ||೬೧||

ಕರಿಗೆ ಹರಿ ಹರಿಗೆ ಶರಭಂ |
ಶರಭಕ್ಕರೆ ನೃಪತಿ ಮುಳಿಗುಮಾಭೇರುಂಡಂ ||
ನರಿಗೆ ಹರಿ ಕರಿಗೆ ಶರಭಂ
ಹರಿಗೆಂದುಂ ಮುಳಿಯಲಱಿಯದಾಭೇರುಂಡಂ ||೬೨||

ವ|| ಎಂಬುದುಮನಂತಚಾತುರ್ಬಲಂಬೆರಸು ನೆಲಂ ಬೆಸಲೆಯಾದಂತೆ ಪೋಗಿ ಪೌದನಪುರದ ಪೊಱಗೊಡ್ಡುವುದುಂ, ಅಟ್ಟಿ ತಿಂಬ ದೈವಕ್ಕೆ ಪಾಳಂಬಟ್ಟಂತಾನುದೊದು ಸಿಂಹರಥಂ ಬಲದ ಕಳಕಳಕ್ಕೆ ಕೆಳರ್ದು—

ತುಱಿಯೆ ಪದಾತಿಯಂ ತವೆ ತುರಂಗದಳಂ ತುರಗಂಗಳಂ ರಥಂ
ತುಱಿಯೆ ರಥಂಗಳಂ ತುಱಿಯೆ ದಂತಿಗಳಂತವೆ ಸೇನೆ ಮಿಱ್ತ್ರ ತ್ರೊ ||
ತ್ತುಱಿದುಱದಂತೆ ತಮ್ಮೊಳಗೆ ಮುಮ್ಮಱಿಯಾಗಿರೆ ಗರ್ಜಿಸುತ್ತೆ ಸೊ |
ಕ್ಕುಱಿಸೆ ದಿಶಾಗಜಂ ರಣದೊಳೇಱಿದ ಕೇಸರಿ ತಾಳ್ದಸ್ಯನಾ ೬೩||

ವ|| ಅವನೊರ್ವನಂ ಮಾರಿಯುಱೆದಾಡಿಸಂತೆರೆಡೆ ಪೋಗಿ ಪೇೞ್ದ ಕೇಳ್ದು ಜರಾಸಂಧಂ ಜರಾಜರ್ಝರನಂತೆ ಜಕ್ಕನೆ ಜಱಿದು ಸ್ವಯಂಬರದನುವರದೊಳ್ ವಸುದೇವನ ಕೂರ್ಪಂ ಕಂಡನಪ್ಪುದಱಿನವನಲ್ಲದಿವನ ಮಿತ್ತುವಂ ಮಿಡಿಯಾರ್ಪರಿಲ್ಲೆಂದು ಶೌರಿಪುರಕ್ಕೆ ಪುರುಷರ್ಗಳಂ ಕಳಪಿ

ಸಿಂಹರಥನನಾವನೊಂ ಪಿಡಿದು ತಂದವಂಗೆ ತನ್ನ ಮಗಳುಮಂ ಬೇಡಿದ ನಾಡುಮಂ ಚಕ್ರವರ್ತಿ ಕೊಟ್ಟಪನೆಂದು ಗೋಷಣೆಯಿಡಿಸೆ ಕಂಸಂ ಪಿಡಿದು ವಸುದೇವನಲ್ಲಿಗೆ ತಪ್ಪುದುಮಾನಕದುಂದುಭಿಯಾನಕದುಂದುಭಿಧ್ವನಿಯಿಂ ಚಟ್ಟರೊಳಗೆ ಪೆಸರಂ ನಿಲಿಸಿದೆಯೆಂದು ನಲಿದು ಪ್ರಸ್ಥಾನಭೇರಿಯುಂ ಪೊಯ್ದಿಪೊಱಮಡುವುದುಮಂ ನೀಂ ಬರಮಿದಾವ ಭರಮೆಂದು ಕಂಸಂ ನಿವಾರಿಸಿ ಪೇೞ್ದು ಪಡೆವೆರಸು ಪೌದನಪುರಕ್ಕೆತ್ತಿವಪ್ಪುದುಂ ಸಿಂಹರಥಂ ಕೇಳ್ದು ಗಹಗಿಸಿ ಬಾಯ ತಂಬುಲಂ ಸೂಸೆ ಸೊರ್ಕಾನೆದಿಂಬಂಗಾಡೆ ಪೋಱಿಗೆಯೆಂಬಂತೆ ಚಕ್ರವರ್ತಿಯ ಬಲಮುಂ ಬಱಿಕೆಯ್ದುನ್ನ ಸಿಂಹಕ್ಕಡೆಯ ಬಡವರ ಬಲವೊಂದು ಪಲ್ಲಕೊನೆಗಂ ಬಾರದೆಂದು ಮುಳಿದು ಮುಂದುಗಾಣದೆ ಕದನಕ್ಕಿದಿರ್ಪಂದು ಕಂಸನ ಮೇಲೆ ಸಿಂಹರಥಂ ಸೀಹಮಂ ಪಾಯಿಸೆ—

ಕಂಜನಱಿದೆಚ್ಚ ಕೂರ್ಗಣೆ
ಪಂಚಾಸ್ಯನನುರ್ಚಿ ಪಾಱಿ ಪೋದುದೆ ನೋಡಿ ಪಾ ||
ಯ್ದಂಚಿಕೆವೊಲಂಬಿನ ಬಱಿಯನೆ
ಪಿಂಚೆಸಿ[1] ಗಱಿವಱಿಯ ಪಾಪಿಸಂತಿರೆ ಸಿಂಹಂ ||೬೪||

ಮುರಿದಂಗಂ ನೀಳ್ದ ಗಾತ್ರಂ ಮೊಳಕಲಿಸಿ ಕರಂ ದಂಡೆಯಂ ನೀಡಿ | ದಂದಂ |
ಕರುವಿಟ್ಟಂತಿರ್ಪನಂ ಚಪ್ಪರಿಸಿ ಬೆರಸಿ ಕಂಠಾಗ್ರದೊಳ್ ನಾಲ್ಕು ಬಾಯಂ
ತೆರೆದೇೞ್ಪನ್ನೆಗಂ ಕಿಟ್ಟಲಗನೊದರಿ ಮೇಲ್ವಾಯ್ದು ಪಂಚಾಸ್ಯನಂ ವೀ |
ರರಸಾಂಗಂ ಶೂದ್ರಕಂಬೋಲ್ ಕದನದೊಳಱಿದಂ ಕಂಸನತ್ಯುನ್ನತಾಂಸಂ

ಕೇಸರಿಯುಗುರ್ವರ್ಯ್ಯಿಂ ಪೊಸ
ಬಾಸುಳವೇಂ ಕಂಸನಂಗದೊಳ್ ನೆಗೆದುವೊ ಕೂ ||
ರ್ತಾಸತ್ತು ನೆರೆದ ವೀರ
ಶ್ರೀ ಸೆಳೆದೊಂದನಿಯ ಪಸಿಯ ಕೂರುಗುರಿನವೋಲ್ ||೬೬||

ವ| ಅಂತು ಸಿಂಹಮುಂ ಸಂಹರಿಸಿ ಸಿಂಹದಿಂ ಮುನ್ನಮೆ ನೆಲದೊಳ್ ಬಿರ್ದಿರ್ದ ಸಿಂಹರಥನಂ ಮೇಗಱವಕ್ಕುಮೇಕೆ ಬಿರ್ದಯುರ್ದು ಸಿನ್ನ ಸಿಂಹದ ಪಲ್ಲನೆಣಿಸಿ ನೋಡೆಂದದಱ ಪಲ್ಗಳಂ ಕಳೆದು ತಲದೊಳಕ್ಕಿ ಮಂದ

ಪಾ—1. ಪಂಚಸಿ.

ಮತಿಯು ಮುಂದೆ ತಲೆಯುಂ ಜುಂಜಂ ಪಿಡಿದು ಜರೆಯುಕ್ಕೆ ಬಿಟ್ಟು ಗೂಂಟ ನೇಱಿದು ತಪ್ಪಂತೆ ತಂದು ನಿಮ್ಮ ಪಿತಗನಪ್ಪ ಸಿಂಹರಥನಿವನಪ್ಪನೆ ಬೆಸಗೊಳ್ಳ ಮೆಂದು ಬೆಸನನೊಪ್ಪಿಸಿದ ಕಂಸಂಗೆ ವಸುದೇವನಂಗಜೆತ್ರಮನಿತ್ತು ಸಿಂಹ ಮುಮಂ ಸಿಂಹರಥನುಮಂ ಬಂಡಿಯೊಳಿಕ್ಕಿ ಕೊಂಡುಯ್ದು ಜರಾಸಂಧನ ಮುಂದಿಡುವುದುಂ ಮಂದಸ್ಮಿತಮುಖನಾಗಿ ಚಕ್ರವರ್ತಿ ಬೆಕ್ಕಸಂಬಟ್ಟತ್ತ ಬಾರೆಂದು ವಸುದೇವಂಗೋರಾಸನಮನಿತ್ತು ಮೆಚ್ಚಿದೆಂ ಬೇಡಿಕೊಳ್ಳನೆ ದೇವಬಿನ್ನಪಮಿದೆನ್ನ ಬೆಸನಲ್ತೆನ್ನ ಚಟ್ಟನ ಬೆಸನೆಂದು ಕಣ್ಸನ್ನೆಯಿಂ ಕಂಸನಂ ಪೊಡೆಮಡಿಸೆ:—

ಪರಚಕ್ರಹರಿಗೆ ರಣಕೇ
ಸರಿಗೆನ್ನಂ ಕರ್ಜ ಪೊಱಲಾರ್ಪುದಟೆಂಬ
ಟ್ಟರದೆನಿಬರುಮೊಳರೆಂದೆನೆ
ದೊರೆಯಾನೇಗಣಿತಮವರೊಳಾನೇವಿಕೆಯುಂ　　॥ ೬೭ ॥

ವ॥ ಎನೆ ಕಂಸನಂ ನೀನೆತ್ತಣನಾರ ಮಗನೆನೆ ಕಂಸಂ ಕೈಯುಮ್ಮುಗಿದು ಕೌಶಾಂಬಿಯು ಕಳ್ಳವತಿ ಮಂದೋದರಿಯ ಮಗನೆಂಬುದುಮುಂ ಸವನ ನೆರ ಲಿಱಿಯುಮುಂ ನೋಡಿ ನೀಡು ಸಿರವಿಸಿ ಸಿಜಾಂತರ್ಗತದೊಳ್—

ಸಿಂಗಮು ಸಿಱಿಪೇಸಾಹಸ
ಮಿಂಗುಲಿಗರ ಮಗನೊಳಾಗರಾಪ್ರೌಢ ಪಿಡಿಗುಂ
ಮಿಂಗಗನಾಕೃತಿಯೊಳಮು
ತ್ತುಂಗನಿವಂ ರಾಜಪುತ್ರನಾಗಲ್ವೇಳ್ಕುಂ　　॥ ೬೮ ॥
ಕಾಗೆ ಪೊರೆದಸಿತಜಿಂದಂ
ಕೋಗಿಲೆ ತಾನಜ ಪಿಳ್ಳೆಯುಕ್ಕುಮ ಬೇಗಂ ॥
ನೀಗಿ ನವಜಾತವನದೊಳ್ |
ಪೋಗಿಕುಂ ಕರ್ಮಘಟಿತಮಘಟಿತಘಟಿತಂ　　॥ ೬೯ ॥

ವ॥ ಎಂದು ಮಂದೋದರಿಯುಂ ತರಿಸಲಟ್ಟಿದರಸಾಳ್ಪೋಗಿ ಬೇಗಂ ಪೋಮಡು ನಿನ್ನಂ ಚಕ್ರವರ್ತಿ ಚೆಕ್ಕನೆ ಪಿಡಿದು ತರವೇೞ್ದನೆನೆ ಪಿಡಿವೆತ್ತ

ಪಾ.—1. ದಜೆಸ್ನಂಜರದೆ.　　2. ಪಿಳ್ಳೆ.

ಕಳ್ಳನಂತೆ ಕಳ್ಳವತ್ತಿಗೆ ತಳವೆಳಗಾಗಿ ಬಲಿದುದೆತ್ತಣಮಿಟ್ಟುವೇ ನಿಮಿತ್ತಮೆ ನೆ ಸತ್ತವೆನಂಜಸೆಡೆಯೊಳ್ ಬಳೆಗಾದುದಾವ ಕಟ್ಟುಯುಬಸಿಱಿಂ ಬಂದನೆಂ ಪರಿಯಸನ್ನ ಬಸಿಱೊಳ್ ಕಿಚ್ಚಂ ತಗುಳ್ಚಿದನಟ್ಟ ಕಳೆದೊಡಂ ಬೆನ್ನಟ್ಟ ವಪಂ ಮುನ್ನಿನ ಭವದ ಪಗೆಯೆಂದು ಮಂದೋದರಿ ಮಂದಸಂ ಪೊತ್ತು ತಂದು ಜರಾಸಂಧನ ಮುಂದಿಡಾಡಿ ಬಿಟ್ಟ ತಲೆಯುಂ ಬೆಮರ್ತ ಮೆಯ್ಯುಂ ಬೆಳ್ಕ್ರಗನುಂ ಬೆರಸು ಕಾವುದು ದೇವ ಎಂದು ಪುಲ್ಗರ್ಚಿ ಮೆಯ್ಯು ನಿಕ್ಕೆ—

ಸೊಂದಿಯುವನೆನ್ನ ಮಗನ
ಲ್ಲಂ ದೇವರ ಪಾದದಾಣೆ ಬಿನ್ನಪಮಾಕಾ ||
ಳಂದಿಯೊಳಿರ್ದ ಕಂಜಿಸ
ಮಂದಸಿನೊಳ್ ಪುಟ್ಟ ಕಂಸವೆಸರಂ ಪಡೆದಂ || ೩೦ ||

ವ: ಈ ಮಂದಸಿನೊಳಗಣ ತಾಯ ಕಲ್ಗಳಿಕೊಲೆಯೊಡವುಟ್ಟಿದುವೆಂದು ತೀವಿ ತಂದ ಮಾಣಿಕಂಗಳಂ ಮುಂದೆ ಸುರಿದು ಕೊಲ್ವೊಡಂ ಕಾವೊಡಂ ದೇವರೆ ಬಲ್ಲರೆಂಬುದುಮುದಸಂ ದರಹಸಿತಮುಖನಾಗಿ ನಾಗಸಂಪಗೆಯೆಸಜಂತಿರ್ದ ಕನಕಪತ್ರಮನಲ್ಲಿ ಕಂಡು ಬೀಸುಂಬಟ್ಟಿಯುಮಿಲ್ಲದೆ ನಿಬಿಡಮಾಗಿ ಬರೆದಿರ್ದಕ್ಕರಂಗಳಂ ಅನುಮಾನಿಸಿ ತಾನೆ ನೋಡಿ:—

(ಸಂಸ್ಕೃತ) ಉಗ್ರಧೀರುಗ್ರಸೇನಸ್ಯಾಂಕಾನ್ಮಧುರಾನ್ಮಧುರೇಶಿತುಃ |
ಪದ್ಮಾವತ್ಯಾಮಭೂತ್ಸಂದ್ರಾದತ್ಯಾಯಃ ಕಾಮವಹ್ನಿವತ್ ||
ದುರ್ಮುಹೂರ್ತಪ್ರಭೂತತ್ವಾದ್ದೋಷದೋಷಗುಣೇಕ್ಷಣಾಃ |
ಮಂಜೂಷಾಯಾಂ ಪ್ರಕ್ಷಿಪ್ಯ ಯಮುನಾಯಾಂ ವಿಸರ್ಜಿತಃ ||

ವ: ಎಂದು ವಾಚಿಸಿ ಭಾಗಿನೇಯನಪ್ಪುದನಱಿದು ಸಂತಸದಂತನೆಯ್ದಿ ಬೇಡಿದ ಕಾಡೊಳ ಮುತ್ತುಕೆಂಡುದೆಳಕಾಱಿಗೊಳ್ವಂಗೆಱಂಗೊಟ್ಟಂತಾಯ್ತು ಕವರುಕತ್ತಿಗೆ ಕಡಿತಂಬಂದಂತಾಯ್ತು ಪ್ರದ್ಯೋತನಂಗೆ ಪಸ್ತ್ರನಿಧಿಯುಂ ಪಣನಂಬೊಯ್ದಂತಾಯ್ತು ಮುಹೂರ್ತಮೆ ಶುಭಮುಹೂರ್ತ[illegible] ನಂದಗೋವರಿ [illegible] ನಾಗಿ ನೋಡುತ್ತುಮಿರೆ:—

ನಿಸವಂ ನಿನ್ನೆನ್ನ ಕೂಸಿಂಗೊಡೆಮನೆಮನಗಿನ್ನುಂಟೆ ತೇಜಂ ಭವತ್ಸಾ
ಹಸಸಿಂಹಕ್ರೀಡೆಗಾಂ ಪಂಗಿನನನಱಿದಿರೆಂದುತ್ಸವಾತೋದ್ಯಗೀತಾ ||

ನುಸರಂ ಟಂಕಾರವಂ ಮುಂದಿಡೆ ಮದನಧನುರ್ಮಂಜರೀಜೀವೆ ಜೀವಂ ।
ಜಸೆಯುಂ ಕಂಸಂಗೆ ಕೊಟ್ಟಂ ಜಸಮೆಸೆಯೆ ಜರಾಸಂಧನಾನಂದದಿಂದಂ ॥

ವ॥ ಅದಂ ಕಂಡು ಗಲ್ಲದೊಳ್ ಕೆಯ್ಯನಿಟ್ಟು ಮಱವಟ್ಟಿರ್ದ ವಂದೋದರಿಗುತ್ತಲುಂ ತುಡುಗುಂ ಕೊಟ್ಟು ಕಳಿಪುವುದುಂ ಪಡೆದ ಮರೆ ಬೆಳಗೆಯ್ಯಂಡಂತೆ ಬಿದ್ದನೆಂದು ಬಳ್ಳಿತ್ತಿಗೆ ಚಿತ್ತವಡೆದು ಪೇಳುತ್ತ ನಿನ್ನ ಮಚ್ಚಿದ ನಾಡಂ ಬೇಡಿಕೊಳ್ಳನೆ ಕಂಸಂ ತನಗೆ ಪಸಯುಪ್ರಿಯನಪ್ಪ ತಂದೆಯ ನಾಡನೆ ದಯೆಗೆಯ್ವುದೆನೆ ಕಂಸನ ಕೋಪನಕೋಪಗರ್ಭಗಭೋರದೀರಿತಮನಱಿದು ಧರಣಿಪತಿ ತನ್ನಂತ್ರಗರ್ತದೊಳ್:—

ಬಿಸವಮನುಗುಜ್ಜಿಪ್ಪ ಸೀಸಾ
ಹಸಿ ತಂದೆಗೆ ಕಾಣದೀ'ನನೀನಂ' ಸಂಸಾ ॥
ರಸವುದ ದೊಳಗಿದೀತಾ
ಮಸವೆಸಡಿಯ ಬಸಿಱನೊಡೆದು ಪುಟ್ಟುವೆ ಮಱಿಗಳ್ ॥೭೨॥

ಎಸಿತು ಮುನಿದಳುದರ್ಡಂ ನೀ
ರನಿಧಿಯೊಳೊಗೆದವಗ್ನಿ ವಾರ್ಧಯುಂ ತವೆ ಸುಡದಂ ॥
ತೆನಿತು ತನೂಜಂ ತಂದೆಗೆ
ಮುನಿದೊಡವಂತು ಪೊಲ್ಲಕೆಯ್ಯಮ ಪಿರಿದುಂ ॥೭೩॥

ವ॥ ಬಿಸುನೀರ್ ಮನೆಯುಂ ಸುಡುಗುಮೆ; ಕೊಡುವೆನೆಂದು ಕೊಟ್ಟು ಕಳಿಪೆ ಕಂಸಂ ಜರಾಸಂಧಚಕ್ರವರ್ತಿ ಪೇಳ್ದ ಚತುರಕ್ಷೋಹಿಣಿಯ ಬಲಂಬೆರಸು ವಸುದೇವಸಹಿತಮೆತ್ತಿ ಪೋಗಿ ಮಧುರಾಪುರಮಂ ಮಹೀನೂಪುರನುಂ ಕೊಳ್ವಂತೆ ಲೀಲಾಮಾತ್ರದಿಂ ಕೊಂಡು—

ಅರಣಿಯನುರಿಪ್ಪವ ವೈಶ್ವಾ
ನರನಂತಿರೆ ಮನಮುಸಿಸುವ ಮನಸಿಜನಂತು ॥
ತಿರೆ ಪಿಡಿದು ಕಟ್ಟಿ ಕಂಸಾ
ಸುರನಿಕ್ಕಿದನಕಟ ಜನಕನಂ ಸಂಕಲೆಯೊಳ್ ॥೭೪॥

ವ॥ ಅಂತು ಪುಟ್ಟಿಯೆ ಪಾಲಂ ಕಿಡಿಸುವಂತುಗ್ರಸೇನನಂ ಕಿಡಿಸಿ ಮಧುರಾಪುರದ್ವಾರದೊಳ್ ಸಂಕಲೆಯೊಳ್ ಸೆಱೆಗೆಯ್ದುದೆ ಸಂಸಾರಶರೀರಭೋಗನಿರ್ವೇಗಕ್ಕೆ ಕಾರಣನಾಗೆ ಯುವರಾಜಲಕ್ಷ್ಮಿಯನುಱಿದು ಯತಿಮುಕ್ತಕಂ ತಪಸ್ಸಾಮ್ರಾಜ್ಯಲಕ್ಷ್ಮೀಸಂಭೋಗಶೃಂಗಾರಪಯೋನಿಧಿನಿಮಗ್ನಸರೋಜನಾಗೆ ಕಂಸಂ ವಸುದೇವನಂ ಬರಿಸಿ ಸಿಂಹಾಸನಾಲಂ

ಪಾ.—1. ನೆನಗೆ.

ಕೃತನಂ ಮಾಡಿ ಸಾಷ್ಟಾಂಗಪ್ರಣತನಾಗಿ ನಿಟಿಲತಟವಿಘಟಿತ ಕರಕುಶೇಶಯಮುಕುಟ್ಮಲನಿಂತೆಂದು ಬಿನ್ನಯಿಸಿ:-

ಹರಿವಂಶಂ ಹರಿವಂಶದಂತತುಲಭೋಗಖ್ಯಾತಮಾಯ್ತುರ್ವರಾ |
ಧರದಂದಂ ಸ್ಥಿರಮಾಯ್ತು ಶಾಸನಮುಮಾಯ್ತನರ್ಘಮೆಂಬಂತೆ ಪ್ರ ||
ಸ್ಫುರಿಯಂತಾಯಿತದಾನಮಾಯ್ತುದಧಿಯಂತ್ಯುದ್ವೃತ್ತ ಭಾಭಾಮುಮಾ |
ಯ್ತುರವಿಂದಾಕರದಂತೆ ಲಕ್ಷ್ಮಿಗೆಲಾಯ್ತಿಸಿನ್ನ ಕಾರುಣ್ಯದಿಂ ||೨೫||

ಅನೆತ್ತರ್ಕಸುತಪ್ರವಾಹಧರಮೆತ್ತಲ್ಲಿರ್ದ ಮಂಜೂಷೆಯು |
ತ್ತಾನೀಚಾಶ್ರಯಮೆತ್ತ ನಿಮ್ಮ ಬರವೆತ್ತೀಶಾಸ್ತ್ರ ಶಸ್ತ್ರಮಂ ||
ತಾನೆತ್ತಿಕ್ಕುವುದೆತ್ತ ಸಿಂಹರಥನಂ ಚಕ್ರಿಪ್ರಸಾದೋದಯಾ |
ಧೀನಂ ರಾಜ್ಯಮಿದೆತ್ತ ದೇವುದಿಸಿತುಂ ಯುಷ್ಮತ್ಪ್ರಸಾದೋದಯಂ ||೨೬||

ಅದರಿಂದೆನ್ನುಮನೆನ್ನ ರಾಜ್ಯಭರಮಂ ಸಪ್ತಾಂಗಮಂ ಸಸ್ಯಸಂ |
ಪದಮಂ ವಾರಿದನಂಬುಜಾತವನಮಂ ತಿಗ್ಮಾಂಶು ನೀಳೋತ್ಪಳಾ ||
ಸ್ಪದಮಂ ಶೀತಮರೀಚಿ ರಕ್ಷಿಸುವವೊಲ್ ನೀಂ ರಕ್ಷಿಸೆಂದೆಂದು ಬೇ |
ಡಿದನಾತಂ ನತಮೌಳಿರತ್ನರುಚಿಗಳ್ ತೀವ್ರ್ಯಯ್ದೆ ದಿಗ್ಭಾಗಮಂ ||೨೭||

ವ|| ಅಂತು ಬೇಡಿಕೊಂಡು ತನ್ನಯ ಮನೆಯ ಬಲದ ಕೆಲದೊಳನೇಕನೂತ್ನರತ್ನರಾಜಿರಾಜಿತ ಚಂಚತ್ಕಾಂಚನಮಯಮಹಾರಾಜಭವನಮುಮಂ ಮಾಡಿಸಿ ಕೊಟ್ಟು ಮುನ್ನಮೆ ವಸುದೇವನ ರೂಪವಿಲಾಸಸೌಭಾಗ್ಯಭಾಗ್ಯೋದಯಮಂ ಕೇಳ್ದು ಕಿವಿವೇಟಂಗೊಂಡು ಕಾಮುಕಕಾರ್ಮುಕನಿರ್ಮುಕ್ತ ಶಿಲೀಮುಖಸಹಸ್ರಸಮಾಕ್ರಾಂತಮಾನಸಸರೋಜಸಂಭಾವಕಿಯಾದ ದೇವಕಿಯ ಭಾವಮನಂತಃಪುರಪರಿಚಾರಕಿಯರಿಂ ಕೇಳ್ದು—

ಭೂವರವಸುದೇವಂಗೆ ಮ |
ಹೀಪಿಶ್ರುತಕಂಸರಾಜನಿತ್ತಂ ಬುಧನಂ ||
ಭಾವಕಿಯಂ ಮನ್ಮಥನಂ
ಜೀವಕಿಯಂ ವಿಚಿತ್ರವಿಭವದಿಂ ದೇವಕಿಯಂ ||೨೮||

ಸರಸಿಜಸಂಭವಂ ಕುಸುಮಸಾಯಕನಾಗಿ ಸುಧಾಂಶು ಚಂದನಂ |
ಸರಸಿಜಮುತ್ಪಲಂ ಸಂಪಿ ಚಂದ್ರಿಕೆ ಮಾಲತಿ ಚಂದ್ರಕಾಂತಬಂ
ಧುರಪರಮಾಣುವೆ ಬಿಮ್ಮನಾಕ್ರಮನಸ್ಕುಮಾರಹಸ್ತದಿಂ
ವಿರಚಿಸಿದಂ ನಿಜೇಶಮುಖಸೌರಭಭೃಂಗಿಯನಾಂತೆಂಗಿಯಂ ||೨೯||

ವ|| ಮತ್ತಮಾಮನೋಜರಾಜಯೌವನವನವಸಂತಲಕ್ಷ್ಮಿಯ ಚರಣಪಲ್ಲವಾರುಣಿತನಖಮಯೂಖಮಣಿಮಾಲಾಮಂಜರಿಯಾರಾಜಶೇಖರರತ್ನನ ಚೂಡಾಮಣಿಗೆ ಚೂಡಾಮಣಿಯಾಗೆಯುಂ, ಅರತಿಪತಿ ಕೃತಕಗಿ

ರಿಸಾನುಕಲ್ಪಲತೆಯಾಜಾನುಕಲ್ಪಲತೆಯಾಹರಿವಂಶಪಾರಿಜಾತಶಾಖಾನುಕಾರಿ
ಯಾಜಾನುಶಾಖಾದ್ವಯಮನಾವೇಷ್ಟಿಸಿಯುಂ, ಆಮನ್ಮಥಮಹಾರಾಜರಾಜ
ಭವನಮೂಲಸ್ತಂಭಪಾಂಚಾಳಿಕೆಯ ರಂಭಾಸ್ತಂಭಾನುಕಾರಿಯಾದೂರು
ಶೋಭೆಯಾಕುಮಾರಕುಂಜರನ ಮನಃಕುಂಜರಾಲಾನಸ್ತಂಭಮಾಗೆಯುಂ,
ಆಕಾಂತೆಕೇಳೀತರಂಗಿಣೀಪುಳಿನಸ್ಥಳಿಯ ನಿತಂಬಪುಳಿನಸ್ಥಳಮಾರಾಜರಾಜ
ಹಂಸನ ಲೀಲಾರಾಜಹಂಸೀವಿನೋದಕ್ಕೆ ಪುಳಿನಸ್ಥಳಮಾಗೆಯುಮಾಕಾಮ
ಕಾಮುರ್ಕಾಯಮಾನ ಭ್ರೂಲೇಖೆಯ ಮುಷ್ಟಿಗ್ರಾಹ್ಯಮಧ್ಯಮಾಧನುರ್ವಿ
ದ್ಯಾವಿಶಾರದಪ್ರತ್ಯಾದೇಶನ ಕೋದಂಡಮಧ್ಯಪ್ರದೇಶಮಾಗೆಯುಮಾಕು
ಸುಮಾಯುಧಕುಂಭಿಲೀಲಾಕುಂಭಿನಿಯ ಕುಚಕುಂಭಮಾರಾಜಮೂರ್ಧಾ
ಭಿಷಿಕ್ತನ ಸಾಮ್ರಾಜ್ಯಾಭಿಷೇಕಶಾತಕುಂಭಕುಂಭಮಾಗೆಯುಮಾಶೃಂಗಾರ
ಸಂಭವಶರಚ್ಚಂದ್ರಚಂದ್ರಿಕೆಯ ಮುಖಚಂದ್ರನಾಹರಿವಂಶಚಕೋರೀ
ಚಂದ್ರನ ಚಂದ್ರಿಕಾವಿಹರಣಕ್ಕೆ ಸಂಪೂರ್ಣಚಂದ್ರನಾಗೆಯುಮನೂನಕಾ
ಮಸಾಮ್ರಾಜ್ಯಸುಧಾಪಯೋಧಿಯೊಳೋಲಾಡುತ್ತುಮಿರೆಯಿರೆ:—

ತನು ಸೋಂಕಿಂ ಮಧುರಾಧರಾಮೃತದೆ ಸರ್ವಾಂಗೀಣಸೌಗಂಧ್ಯದಿಂ |
ಘನಲಾವಣ್ಯಸಮೃದ್ಧಿಯಿಂ ವಿಕಸಿನಾದಸ್ವಾತಿಯಿಂದೀಯೆ ಕಾ |
ಮಿನಿ ಪಂಚೇಂದ್ರಿಯಸೌಖ್ಯಮಂ ತಳೆದನುರ್ವೀಪಾಲವಂಶಪ್ರಭಾ
ದ್ಯುನದೀದ್ಯೋತಪಯೋಂಬುಜಂ ಪ್ರತಿದಿನಂ ಸಾಹಿತ್ಯವಿದ್ಯಾಧರಂ ೮೦ ||

—ಗದ್ಯ—

ಇದು ಮೃದುಪದಬಂಧಬಂಧುರ ಸರಸ್ವತೀಸೌಭಾಗ್ಯಭಂಗ್ಯಭಂಗಿವಿಧಾನದೀಪವರ್ತಿ
ಚತುರ್ಭಾಷಾ ಕವಿಚಕ್ರವರ್ತಿ ನೇಮಿಚಂದ್ರ ಕೃತಮುಂ
ಶ್ರೀಮತ್ಪ್ರತಾಪಚಕ್ರವರ್ತಿ ವೀರಬಲ್ಲಾಳದೇವ ಪ್ರಸಾದಾಸಾದಿತ
ಮಹಾಪ್ರಧಾನ ಸರ್ವಾಧಿಕಾರಿ ಪದ್ಮನಾಭದೇವ ಕಾರಿತಮುಮಪ್ಪ

## ನೇಮಿನಾಥ ಪುರಾಣದೊಳ್

ದೇವಕೀದೇವಿ ವಿವಾಹೋತ್ಸವವರ್ಣನಂ

ಷಷ್ಠಾಶ್ವಾಸಂ ಸಮಾಪ್ತಂ

# ಸಪ್ತಮಾಶ್ವಾಸಂ.

ಶ್ರೀವರಸು ಬಂದ ಚಂದ್ರಮ |
ನೀವಮೃತವನೀಯೆ ತನಗೆ ಮಧುರಾಧರದಿಂ ||
ದೇವಕಿಯ ನಗೆಮೊಗಂ ವಸು |
ದೇವಂ ದೇವಂಬೊಲಿದನಪ್ರತಿಮಲ್ಲಂ ||೧||

ವ|| ಒಂದು ದಿನಂ ಮಧ್ಯಂದಿನಸಮಯದೊಳ್ ಮಧುರಾಪುರಕ್ಕೆ— ಬರಿಯೆಲ್ ಬೇಯುತಿರ್ದ ಕಂಕಾಳಿಕೆ ಪೆಡತಲೆಯೊಳ್ ಪೊಕ್ಕು ಕಣ್ |ತೋರ್ಪ ಕೆಯ್ಯಾ| ಳ್ಸರೆ ಪಾತಾಳಕ್ಕೆ ಪೊಕ್ಕಿರ್ದೊಣವಸಿಱುಡುಗಿದೊಂದುರಂ 'ಪೊಳ್ದು' |ಬಾಯ್ ಬೇ|| ಕರಿಯೋದಂತಿರ್ದ ಬೆಸನಂಗುಳ್ ಗಟಿಗಟಿಜಂತ್ರಂಬೊಲಾಗಿರ್ದ ಮೆ| ಯ್ಸಿರಿ ಚಿದ್ರಾಪಕ್ಕ ಪಕ್ಕಾಗಿರೆ ಚರಿಗೆಗುಣ್ಬಂದನೊರ್ವಂ ಮುನೀಂದ್ರಂ ||

ಬಿಸಿಲಿಂದಳುರ್ದೊಡೆದೊಡಲಿಂ
ಪಸಿವೆಂಬಸದರ್ಥ ಶಾಂತರಸದಿಂ ಮುಸಿಯಾ |
ಯ್ತೆಸದಳಮೆನೆ ಮೆಯ್ಯುಮಲಂ |
ಮಿಸುಗಿದುದಾಮುದನಕರಟಿಕಂಟೀರವನಾ ||೨||

ಕೆಳರ್ದು ಮಿಂಚುರಿದು ಗಗನಮು
ನಳುರ್ದ ತಪೋಧನನ ತಪದ ಸೆಗಳ್ ಕನಲ್ದು |
ವ್ವಳಿಸೆ ತನಗೊಂಡಿ ಕಾಡುವ
ಜಳಧರಮಂಡಳದ ಮಱೆಯನರ್ಕಂ ಪೊಕ್ಕಂ ||೩||

ವ|| ಅಂತುಮಲ್ಲದೆ—

ಅಡವಿಯ ಕಿಚ್ಚು ಕರ್ಚಿದುದು ಪುಲ್ಗಳನುಕ್ಕುವ ನೀರ ಕಿಚ್ಚು ಪೆ |
ರ್ಗಡಲೊಳಡಂಗಿ ಪೋದುದು ಪುರಾಂತಕನಗ್ಗಳಗಣ್ಣ ಕಿಚ್ಚು ಕೆಂ ||

ಪಾ.—1. ಪೊಣ್ಣು.

ಜೆಡೆಯೊಳಗಿರ್ದ ಗಂಗೆಯೊಳಗಡಿಂದುದು ತನ್ನುರಿಪಕ್ಕೆನಲ್ ಕರಂ
ಕಿಡಿಗಿಡಿ ತಾಗುತಿರ್ದುದು ಮಹೋಗ್ರತಪಂ ತಪದಂಕಕಾರನಾ ॥೫॥

ವ ॥ ಅಂತಪ್ಪ ತಪೋಧನನತಿಮುಕ್ತಕನೆಂಬೊನುಗ್ರಸೇನನಗ್ರಜನಪ್ಪ ದೇವಸೇನನ ಸೂನು ದೇವಕಿಯುಗ್ರಜಾತಂ ಕಂಸಂ ತನ್ನ ತಂದೆಯುಂ ಸೆಱೆಗೆ ತಂದುದೆ ತನಗೆ ನಿರ್ವೇಗನುಂ ತರೆ ತಂಪಗೆಯ್ಯುತಿರ್ದು ಮಾಸೋಪವಾಸದ ಪಾರಣೆಯೊಳ್ ಬ್ರಾಹ್ಮಸಲೆಂದು ಕಂಸನರಮನೆಯ ಮುಂದಣಿಂ ಚರಿಗೆಗುಡುವುದುವಾಸ್ರಸ್ತಾವದೊಳ್ ಪೊಪತಳರಂ ಪಿಡಿದಾಡುವೆಳಲತೆಯಂತೆ ದೇವಕಿಯಾನಂದವಸ್ತ್ರಮುಂ ಪಡಲಗೆಯೊಳ್ ಪಿಡಿದೊಸಗೆಮುರುಳ್ಗೊಂಡು ದೆಸೆವರಿನರಿವಾಡುವ ಜೀವಂಜಸೆ ಬಿಸಿಲ್ ಪತ್ತಿದತಿಮುಕ್ತಕನಂತೆ ಬಂಬಳ ಬಾಡಿಸ ಯತಿಮುಕ್ತಕನಂ 'ಕಂಡು' ಪೋಗದುದಿರ್ದರೆ ತಮ್ಮಂ ನಿಲಿಸಲ್ಬಂದವಳೆಂದು ಮುನಿ ಮುಂದೆಗೊಂಡು ಬರ್ಪನ್ನೆಗಂ

ಭಾವಾ ನಮೋಸ್ತು ನಿಮ್ಮಡಿ ।
ದೇವಕಿ ಮೆಯ್ಸೋರೆದಳೆಂದು ಬಂದಿರೆ ಲೇಸಾ ।
ಯ್ತಾವುದನುಡ ತಂದಿರೆನು
ತ್ತಾವಧು ಮೆಯ್ಯುಸಿಸಿ ನಗುತುಮುತ್ತುಂಬಂದಳ್ ॥೬॥

ಬತ್ತಲೆ ಬಂದಿರ್ ಪಿಡಿಯಿಂ
ಸುತ್ತಿಪುದಂ ನಿಮ್ಮ ತಂಗಿಯುಂಡಲಟ್ಟಿದಳೆಂ ॥
ದೆತ್ತಿದಳವಂಗೆ ಮೊಗಮುರಿ
ದತ್ತಾತ್ತಾನಂದವಸ್ತ್ರಮುಂ ದೇವಕಿಯಾ ॥೭॥

ವ ಅಂತು ತನ್ನ ಕುಲವಲ್ಲರಿಯುಂ ಜೀರ್ಣರಸು ಕಿತ್ತಿತ್ತುವಂತೆ ವಿರಕ್ತರ ಮೊಗಕ್ಕೆ ರಕ್ತವಸ್ತ್ರಮನೆತ್ತೆ ನಾಣ್ಚಿದರುಂ ನಾಣ್ಚಿನುಣ್ಚನೆಲನ ಡಿಮೊಗುತ್ತಿದುದೆ(?) ತನಗೆ ನಾಸೋಂಡಿ ಪೋಗುವಸಿತಃಗೆ ಕೇಳ್ ಕೊಂಚಾಡಿ ಕಾಡಿದ ಜೀವಂಜಸೆಯ ವಚನಮೆ ವಾಚಾಸಮಿತಿಗೆ ಪಿಱುತ್ತಾಗಿ ಭಿಕ್ಷುವಿನ ಬುಭುಕ್ಷಾನಳನೆ ರೋಷಾನಳನಾದಂತೆ ಮುನಿ ಮುನಿಯದೊಡಂ ಮುನಿಯದ ಮುನಿ ಮುನಿದಿಂತೆಂದಂ:—

ಪಾ. —1. ಸೋಂದು.

ಅತ್ತಿಗೆ ಕೇಳ್ವೆಱತಿನ್ನೈ |
ಮಿತ್ತಿಕಗೆನವೇಡ ಪೇೞ್ವೆಮೀಬದ್ಧವಣ ||
ಕ್ಕೆತ್ತಿದ ಕೆಯ್ಯ್ಯನೆ ಬಸಿಱಿಂ |
ಗೆತ್ತುವೆಯಿದು ಕೂಡದಂದು ಕಾಡೆಲೆ ಕುಲಟೇ ||೮||

ತೋಱಸುಗುವೆಮಗೆ ತೋಪಿರ್
ಕೂಱಿಯು ದೇವಕಿಯು ತನಯನಿಂದಂ ನೆತ್ತ ||
ಗರ್ಱುವ ಕಂಸನ ನೆತ್ತರ |
ಕೂಱಿಯುಸಿದು 'ತಪ್ಪದಂದು'[1] ಸಿನಗುಂ ಮಗಳೇ ||೯||

ವ|| ಎಂದೊಡಾಕೆ ಕೆಕ್ಕಟಗೆ ಕಟ್ಟಗಿಳರ್ದಿಟ್ಟಂಗಾಱದೆ(?) ಪೆಂಟೆಯಂ ಕಚ್ಚುವಂತೆ ಪುಟ್ಟಿದ ಮನೆ ಪೊಕ್ಕಮನೆಯೆರಡುಂ ಕೇಡನಾಡಿ ತೋರ್ಪಂತಾಕಪ್ಪಡಮನೆರಡು ಕಡಿಯಾಗೆ ಸೞ್ನೆ ಸೀೞ್ದಿಡಾಡುವುದು ಮವರ್ಮುತ್ತಮಿಂತೆಂದರ್:—

ಜೀವಂಜಸೆ ಯುದ್ಧಸಿಬ |
ದ್ಧಾವನಿಯೊಳ್ ನಿನ್ನ ಗಂಡನಂ ತಂದೆಯುಮಂ ||
ದೇವಕಿಗೆ ಪುಟ್ಟಿದಾತನೆ |
ದೇವಕಾ ದೊಡಮುಡುಕ್ತುರ್ ಕೊಲ್ಲದೆ ಮಾಣಂ ||೧೦||

ವ|| ಎನೆ ತನ್ನ ಕಿವಿಗೆ ಮಹಾಪ್ರಳಯಂ ಕವಿದಂತಾಗೆ ಕಾಲಮೇಲೆ ಬಿದ್ದಱಿಯದೆ ಗೆಯ್ದುಂ ಕ್ಷಮಿಯಿಸುವುದುಮೆಂದ ಜೀವಂಜಸೆಗವರಿಂತೆಂದರ್ :—ಮ್ಮ ಪರಕೆಗೆ ತೆಱವ ಬಾಯುಂ ಬಯ್ಯುಳ್ಗೆ ತಿಱಿಯಿಸಿದೆ, ಕ್ಷಮೆಗೆ ಬಂದ ಮನಮುಂ ಮುನಿಸಿಂಗೆ ಒರಿಯಿಸಿದೆ, ಎಂತು ಕ್ಷಮಿಯಿಸುವೆಂ, ಅದು ನಿನ್ನ ನಸುನಗೆನಗುವ ಮೊಗಮನೞಿಸಿದಲ್ಲದೆ ಮಾಣದು ;

ದೇವಕಿಗಪ್ಪ ತನೂಜಂ |
ಭೂವಳಯಮನೆಱಗಿಪಂ ನಿಜಾಂಘ್ರಿಸರೋಜ ||
ಕ್ಕೇವಿಧದಿಂದಮಿದಾತನ |
ಭಾವಿಸಲಾಲಿಖಿತಮೆಂದು ಮುನಿಪತಿ ಪೋದಂ ||೧೧||

ಪಾ.—1. ತಪ್ಪಿದಂದು.

ಎಂಬುದುಮಂಬು ಕೊಂಡ ಮಱಿವುಲ್ಲೆವೊಲಾಕೆ ನೆಲಕ್ಕೆ ಬಿರ್ದು ಬಾ|
ಯಂ ಬಸಿಱಿಂಬಿವಂ ತರೆದುಕೊಂಡು ಪೊರಳ್ದಳ್ ನಂಬಿ ತೊಟ್ಟ ಹಾ ||
ರಂಬೆರಸಿಟ್ಟ ಕೆಯ್ದು ಕಡಗಂ ಬೆರಸಿಕ್ಕಿದ ಕರ್ಣತಾಳಪ
ತ್ರಂಬೆರಸಶ್ರುಗಳ್ಕೆದಱಿದಾಕೆಯ ಗಂಡನ ಸಾವುಗಂಡವೊಲ್ ||೧೨||

ವ॥ ಅಂತಾಬಾಲೆ ನೀರ್ಪೊಱಗಿಱಿದ ಬಾಳೆಯಂತೆ ಮಿಡುಮಿಡುಮಿಡುಕಿ ಪುಡಿಯೊಳ್ ಪೊರಳ್ದು ಮೂರ್ಛೆವೋಗಿ ಪರಿಚಾರಕಿಯರ್ ಪರಿತಂದೆತ್ತಿಕೊಂಡು ಪೋಗಿ ಪಾಸಿನೊಳ್ ಪವಡಿಸಿ ಬಿಜ್ಜಣಿಗೆಯೊಳ್ಬೀಸಿಯುಂ ಕಣ್ಬನಿಯುಂ ಸೂಸಿಯುಮಂತಾನುಮೆಚ್ಚಱಿಸಿ ಮೂರ್ಛೆದಿಳಿಯೆ ತಾನುಂ ತಿಳಿದು ಪೆಱುಗಱಿದಱಿಲ ಕಿಚ್ಚುಂ ಪೊಲ್ಮರದ ಕಿಚ್ಚಿನಂತೊಳಗೊಳಗೞುತೆ ಕನ್ನದೊಳ್ಸತ್ತ ಕಳ್ಳನ ತಾಯಂತೊಳಗೊಳಗೞುತೆ 'ತನ್ನ ಗೆಯ್ದ' ಪಾತಕದಂತಾರ್ಗಮುಸಿರಲಣ್ಮದೆ ತನ್ನೊಳಿಂತೆಂದಳ್:—

ಕಂಜದಳಾಕ್ಷಿ ಮೆಯ್ನೆರೆವುದೇಕೆ ಮಹಾವ್ರತಿ ಬರ್ಪುದೇಕೆ ಬಂ|
ದಂಜದೆ ಮೂಱನಂ ಮಿಗೆ ಕಳಲ್ಚಿದನೇಕೆನಗಾತಪೋಧನಂ ||
ನಂಜಿಡಲೇಕೆ ಭಾವಿಪೊಡಿದೆನ್ನ ಪುರಾಕೃತಕರ್ಮಮೆಂದು ಜೀ
ವಂಜಸೆ ಜೀವಮಂ ಪದುಳಮಿಟ್ಟು ವಿಷಾದದೊಳಿರ್ದಳಿರ್ಪಿನಂ ||೧೩||

ವ॥ ಕಂಸನಾಕೆಯಿರ್ದವಸ್ಥಾಂತರಮಂ ಬಂದು ಕಂಡು ಬೆರ್ಚಿಬೆಗಡುಗೊಂಡು—

ಮೊಗಮಿಸಿತಾದುದೇಕೆ ನಗೆ ಪೋಗಲಿದೇಕೆ ಕಡಂಗಿ ಕಣ್ಣ ನೀರ್
ನೆಗೆದಪುವೇಕೆ ಸುಯ್ ಬಿಸಿಯವಾದುವಿದೇಕೆ ಕದಂಪು ಕೆಂಪನಾ ||
ಳ್ದುಗುಳ್ದಪುವೇಕೆ ಗಗ್ಗರಿಕೆಯುಗ್ಗಳವಾದುವಿದೇಕೆ ಸೀಂ ಕರಂ
ಪೊಗೆದಪಿಯೇಕೆ ಪೇೞನಗೆ ಪಂಕಜಪತ್ರವಿಶಾಲಲೋಚನೇ ||೧೪||

ವ॥ ಎಂಬುದುಂ

ಸಿಡುಸುಯ್ಗೆ ಮೊಗದ ಕಂಪಂ
ಕುಡಿವಳ ಪಾಱಿಮವು ಮೊಗದೊಳಿಳ್ಳಕ್ಕರಪಾ
ಗಡೆ ಪಾಱಿದಂತಿರಿವು ಪೋದೊಡೆ |
ನುಡಿಯುಳ್ಕಱುಮದಂತೆ ಮೋನದೊಳಿರ್ದಳ್ ||೧೫||

---

ಪಾ — 1. ತನಗೈದಿದ.

ವ|| ಅಂತಾಕೆ ಮೂಗರ್ ಕಂಡ ಕನಸಿನಂತೆನುಮಾನನಱಿಯದೆ ಕಿಱಿದು ಬೇಗಮಿರ್ದು ನಿನಗೆ ನುಡಿಯಲ್ತಕ್ಕ ಮಾತಲ್ಲೆಂದು ತಲೆವಿಡಿಸಿ ಯುಮುನನಸಿವಕ್ಕರಲಾಱದಿದೆಂದು ಬಾರದುದಂ ಬಂದನೆಂದು ಮೊಯ್ದುನಿಸಿ ದೇವಕಿದೇವಿಯಾನಂದವಸ್ತ್ರಮಂ ತೊಱೆ ತಟತಟಗಾಡಿದೊಡೆ ಎನಗೆನಗೆ ಯೊಂದಱಿಯದತಿಮುಕ್ತಕಮುನಿ ಮುನಿದಿಂತೆಂದನೆಂದರ್ಥೋರ್ಕಿಯೊಳ ಮೊನಂಗೊಂಡೆಡೆಗೆ ಗುಡುಗುಡನೆ ಕವಿವ ಕಣ್ಬನಿಗಳಂ ಸೆಳ್ಳುಗುರಿಂ ಸಿಡಿದುಸಿಡಿದು—

ತನ್ನನುಜೆಗೆ ನಂದನನ
ತ್ತ್ಯನ್ನತನಪ್ಪಂ ಗಡಾಗಿ ಸಿಂಟಿದುವೀವಾ ||
ತೆನ್ನದಿರೆನ್ನಯ ತಾಯುಮ |
ನೆನ್ನುಮನವನೋಲೆಗಳಸುವಂ ಗಡ ಕೇಳಾ ೧೬||

ವ|| ಎನೆ ಕೇಳ್ದು ಕಂಸಂ ಮೊಜಗಂ ಕೇಳ್ದು ಹಸನಾತೆ ಕುತ್ತು ವಡೆನಂತಾಗಿ:

ಕವಡೆ ಕಲಂಕದಿಕ್ಕುವೆಮ ಮರುನ್ನದಿಯುಂ ಶ್ರೋಕದಿಕ್ಕೆ ಕಂದು ನಾ
ದೆ ಪೊಸಪೂವುಮೇನರೆಯ ಚಂದನದೊಳ್ ಕಿಡಿ ಪುಟ್ಟದೇ ಸುರರ್ ||
ಸೊದೆಗಡಲಂ ಕರಂ ಕಡೆಯ ಪೇಜ಼್ ವಿಷಮೇದೆ ಶಾಂತರಪ್ಪರಂ
ಮದಮುದಿತಾತ್ಮರೇಱಿಸೆ ವಿಕಾರಮನೆಯ್ದದೆ ಕೆ ಸ್ವೈರಪರ್ ||೧೭||

ಮರುಳೆ ಕಡುಪ್ರೊಲ್ಲಕೆಯ್ದಲ್
ಪಿರಿಯಂಗಂ ಮರ್ಮವೇದಿಗಂ ಮೂರ್ಖಂಗಂ
ನರಪತಿಗಂ ಧನಪತಿಗಂ |
ಗುರುಗಂ ದೈವಕ್ಕಮಂಜವೇಱ್ಕುಮವೋಘಂ ೧೮||

ವ|| ಇದಕ್ಕೋರ್ವಜರೇಕೆ | ಜನಮೆಲ್ಲಮೆಗುವರ್ಗೆ ಗದವರು ರದರನುರದಿಪ್ರದಸೀವೊಲೆಯುಣ್ಬಮಕ್ಕಳೊಳಗಾಗಿ ಬಲ್ಲರ್ |"ಸಮುಣ್ಣೋ ಅವೋನಾವಮುಣ್ಣೋ" ಎಂಬುದು ನಗುತೆಂದೊಡಂ ಸವರ್ಣ ಮಾತು ನಿತ್ಯಂ ಅದೊಡಮೇನಾಯಿತ್ತಿ ವಕೆಂದುಪಾಯಮಂ ನೆನೆದೆಂ ಕಾರಣ

ಪಾ.—1. ನಂತೆನುಮ್ಮ.

ಮಿಲ್ಲದೆ ಕಾರ್ಯಮೆಂತಾದಪ್ಪುದು | ಇದರ್ಕೆ ಕಾರಣಭೂತಮಪ್ಪ ದೇವಕಿಯನೆ ಕೊಲ್ವೆನೆಂದು ಮನದೊಳೆತ್ತಿ ಕೊಳ್ವುದುಂ ಬಂದು ದಿವ್ಯಧ್ವನಿಯಾಗಸದೊಳಗೊಗೆದುದನೆ ಕೇಳ್ದವಧರಿಸಿ ದಿವ್ಯಕ್ಕೆ ಪಲ್ದಿನುತ್ತ್ರವಾಗಳೆ ವಸುದೇವಸ್ವಾಮಿಯ ಸಮೀಪಕ್ಕೆ ಪೋಗಿ, "ವಿನೀತಿಧೂರ್ತಲಕ್ಷಣ"ಮೆಂಬಂತೆ ಭಯಸ್ಥನಾಗಿ ತುಱಿಲ್ಗೆಯ್ದು ಕಾಲ ಕೆಳಗೆ ಕುಳ್ಳಿರ್ದು ಕೆಯ್ಮುಗಿದು ಕಂಸನಿಂತೆಂದಂ:—

ತವರುಂ ಪೊಕ್ಕಿಲುವಾಗಿ ಮದ್ಗೃಹಮಿವಳ್ಗೆಸಂತಸಕ್ಕಿಲ್ಲದು |
ಕ್ಕೆವಸೌಧರ್ಮಿಕೆಯಿಂದಮೇಂ ಭಗಿನಿಯುಪೇತ್ತ್ರುತ್ಸವಕ್ಕಾದ ಬ ||
ದ್ಧವಣಂ ಪೆರ್ಮನೆಗುದ್ಘವಂ ಪಡೆಗೆ ಸಾಸಿರ್ಮಕ್ಕಳಂ ಪೊತ್ತು ತೀ |
ವುವುಮಂ ಪೋ ಕಳಿಸಿಂ ಮದೀಯಭವನಕ್ಕೆ ದೇವಕೀದೇವಿಯುಂ ||೧೯||

ಎಂದು ಪಯೋಮುಚವಿಷಕಂ |
ಭಂ ದೈನ್ಯಂಬಟ್ಟು ಬೇಡಿಕೊಂಡಂ ದಮಗೆ |
ಯ್ದೊಂದೊಡೆ ಮನಮಿಲ್ಲದ ಮನ
ದಿಂದಾವಸುದೇವಸಿತ್ತನಾತಂ ಪೊತ್ತಂ ||೨೦||

ಸಿರಿವಂತರಾ ತಂಗೆವಿರಂ |
ತರಿಸಿ ತವರ್ಮನೆಗೆ ಪಿಂಗಲುಂ ಪೇಱಲುಂ ಬಿ |
ತ್ತರಿಪ್ಪುದೆಸ ಬಲ್ಲದೆರ್ದೆ ಕ |
ತ್ತರಿ ನಾಲಗೆ ಬೆಲ್ಲಮೆಂದು ಬಲ್ಲವರೊಳರೇ ||೨೧||

ವಿನಯಮೆ ಸಾಧುಜೆಂತೆ ಕರಮರ್ಥಮೆ ತಾನಪಕೀರ್ತಿಹೇತು ಮ |
ಜ್ಜನನತಿವಾಕ್ಪಟುತ್ವಮೆ ಲಸದ್ಗುಣದೂಷಣಮಾಯಿ ರೂಪು ಯೌ |
ವನಮೆ ಪರಾಂಗನಾಪಹರದಿಂ ಬೇಗಾದಪೆನಾತನಿಂದಮಾ
ತನ ಗುಣಗೊಂದು ದುರ್ಜನಿಕೆ ಪುಕ್ಕುದು ಲೋಕದ ಪಾಪವಲ್ಲದೇ ||೨೨||

ಖಲನೇಂ ಕಾಣ್ಗುಮೆ ಗುಣಮುಂ |
ಕಲಂಕಮಂ ಕಾಣದಂತೆ ಸುಜನನುಲೂಕಾ
ವಲಿ ಬಿಸಿಲಂ ಸೂರ್ಯಂ ಕ |
ತ್ತಲೆಯುಂ ಮರ್ದಿಂಗಮಱಸಿ ಕಂಡಹೆಯುಂಟೇ ||೨೩||

ಜನಪದ ಕಿವಿಯೊಳ್ ಪಿಸುಣನೆ |
ಜೆನುಗುಗುವುದು ಕುಡುವ ಭೀತಿಯಿಂ ದಿಕ್ಕರಿಕ ||
ರ್ಣಸಿಕಾಯಾಸ್ಫುಟನಪಟುಂ |
ಘನಕಂಠೀರವ ರವಂಗಳುಂ ಕೊಟ್ಟಪುವೇ ||೭೪||

ಚೆಂತಿಸಿದಂ ಕಿಱುವಂಗೆಯು |
ಸಂತತಿಯಂ ಕೊಂದು ಕೂಗಲಿರುಳುಂ ಪಗಲುಂ ||
ಚೆಂತಿಸನೆ ಕೊಳ್ಳಿತುಳ್ಳರ |
ಚೆಂತಾಗರಪಿ ಯೆಂಬ ನುಡಿಯುಂ ಕಂಸಂ ||೭೫||

ತಂಗಯ ಮಕ್ಕಳನ ಕೊಲ |
ಲ್ಕಂಗುರಮಿಕ್ಕನೆ ಕನಲ್ದು ತಂದೆಯುಮಂ ತಾಂ |
ನುಂಗಲ್ಬಗೆವಂ ಪಱುದಿಂ |
ಬಂಗಾಡಂ ತಿಂಬುದೆಂಬುದೇಂ ಪಾತಕಮೋ ||೭೬||

ವ|| ಅಂತಾತನತಿಕುಪಿತಕ್ರೂರಕರಾಳಕಾಳಾಹಿ ತನ್ನ ತತ್ತಿಯಂ ತಾನೆ ತಿನಲಪ್ಪಂತೆಯುಮತಿಪ್ರಕಟವಿಕಟಭೀಕರಭ್ರುಕುಟಿಯಾಗಿ ಮಸದ ಮುನಿಸೊರ್ಮೆಯುಮಡಂಗದೊಳಗೊಳಗೆ ಕಿನಿಸಿ ಕಿಂಕಿಸಿವ್ರೋಗಿ ಕೆಳರ್ದ ಮಹಾಕಾಳವೆನ್ನವರ್ತನ್ನವರೆಸ್ದುಗಿದು ಕೊಂದು ಸರ್ವಗ್ರಾಸಂಗೊಳಲಿ ಪನ್ತೆಯುಂ ತನಗೆ ತೋರ್ಪರಿಷ್ಟ'ಚೆಷ್ಟ'ವಂತಪ್ಪ ದೇವಕಿದೇವಿಯ ಗರ್ಭ ಚೆಷ್ನತದತ್ತಾವಧಾನನಾಗಿ ಕಂಸಂ ಕಿಲುಂಬೇಱಿದ ಕಾಂಸ್ಯದಂತೆ ಕಲುಷ ವೇಱಿರ್ದನಿಂತು—

ಪೂವಂ ತೋಱಗೆ ಪನಸು ಸ |
ಲಾವಳಿಯುಂ ಪಡೆವ ತೆಱದೆ ಪಡೆಗಾತ್ಮಜರಂ ||
ತೀವಿದ ಬಸಿಱಂ ತೋಱದೆ
ದೇವಕಿಯುಂದೊಸೆದು ಪರಸೆ ಕುಲದೇವತೆಗಳ್ ||೭೭||

ಮೊಲೆಯುಂ ಮೊಗಮುಂ ಚಂದ್ರನ
ನಿಲವಂ ಕೊಂಡೆಯ್ದೆ ಪಚ್ಚಕೊಂಡಂತಿರೆ ಪೆ

ಪಾ. ಭೇ. - 1. ಚೆಷ್ಟ.

ಮೊಗಲೆ ಕರ್ಪಂ ನಗೆಯುಂ ಜಲ
ಜಲಿಸ ಮೊಗಂ ಬೆಳ್ಪನಾಳ್ದುದಾದೇವಕಿಯಾ ॥ ೨೮ ॥

ವ॥ ನವಮಾಸಂ ನೆರೆವುದಂ ಕಂಡು ಕಂಸನವಸ್ಥಾಭೂತನುಂ ಭೀತನುಮಪ್ಪುದರಿಂ ಜನರಂಜನಾರ್ಥಮಾಕೆಗನೇಕಮಾಣಿಕ್ಯಮಯಮಾಗೆ ಮಾಡಿಸಿದ ಸೂತಿಕಾಸದನದೊಳ್ ಸಿರಿಯುಸಿರಿಸುವಂತೆ ದೇವಕಿಯುಂ ತರಿಸಿ ಕಾಪುವೇೞ್ದಿರಿಸಿ ಹಿತರುಮಹಿತರುಮಪ್ಪ ಪರಿಚಾರಕಿಯರಂ ಪರುಠವಿಸಿ ಪುಲಿಯುಂತೆ ಪಾರ್ದಿರ್ಪಿನಮೊಂದರ್ಧರಾತ್ರದೊಳ್—

ದೇವಕಿಯುಮಳಂ ಪೆತ್ತಳ್
ದೇವಂ ಜಸೆ ಪೇಸೆ ಪರಿಯು ಜೆಸದಿಂದಂ ಮಾ
ಯಾಪಿ ಪರಿತಂದು ನೈಗಮ
ದೇವಂ ತಂದಿಕ್ಕೆ ಮುಂದೆ ಮಾಯಾಪಿಶುವಂ ॥ ೨೯ ॥

ವ॥ ರಾಮುಮುಂದಿನಮಳ್ವೆಱಯುಂ ತಪ್ಪಿಸಿ ಕೊಂಡುಯ್ವುಮಳರಂ ಮಳಯಾಚಳಕ್ಕೆ ಕೊಂಡುಯ್ದಂ, ಇತ್ತ ಕಂಸನಾಕಸುಗಳ ಕಾಳ್ಕಳೆಂಬ ದನಿಗೇಳ್ದಲಿಯುಲಿಪ್ರಗೇಳ್ಪ ಬೆಕ್ಕನಂತೆ ಬೊಕ್ಕನೆ ಪಾಱ ಪಾಯ್ದು,

ಪಸಿದುಗ್ರವ್ಯಾಘ್ರನೇಣೀಪಿಶುಗಳನೆ ಗಡಂ ಕೊಂಡು ಕೊಲ್ವಂತೆ ಪಲ್ಲಂ
ಮುಸೆವತ್ಯುದ್ರೇಕದಿಂ ತನ್ನಯ ಸಿರಿವನೆಯೊಳ್ಪೊಕ್ಕು ಪೆವರ್ಗರಿಯಂ ಪೂ
ಜಿಸಿ ಬಾಜೀರ್ವ್ವಂದವಮಂ ದಿಗ್ಬಲಿಗೆದರ್ದವೊಲ್ ಸೂಸೆ ಮಾಂಸಾಸ್ಥಿ |ಮಾಯಾ
ಶಿಶುವಂ ಕೊಂಡಿಕ್ಕಿದಂ ಪಾಸಱೆಯೊಳಸಗಸೋಲ್ ಪ್ರೋಯ್ದು ಕೋಪದಿಂ |ನೃಶಂಸಂ ॥ ೩೦ ॥

ವ॥ ಮತ್ತಮೊರ್ಮೆ—

ಅಸುರದೊಳಿಂದ್ರಜಾಲದ
ಕೂಸುಗಳಂ ಕಂಸನೊಗೆದನೞ್ಯೊಳ್ ನೆತ್ತರ್
ಸೂಸೆ ದೆಸೆದೆಸೆಗೆ ಕಂಪಿಸ
ಪಾಸಂ ಪಿಡಿದೊಗೆವ ಪಟ್ಟುಕಾರ್ಸ ತೆಱದಿಂ ॥ ೩೧ ॥

ವ॥ ಮತ್ತಮೊರ್ಮೆ—

ದೆಸೆದೇವತೆಯ ಕುಸುಂಬೆಯ |
ಕುಸುಮಂಗಳನಿಂಡೆಯಾಡುವಂತಿರೆ ಕೆಂಗ ||
ಲ್ಮಸಗಿ ಪರಿತಂದು ಮಾಯದ |
ಸಿಸುಗಳನೇಱಿದಱಿಯೊಳೊಗೆದನಙ್ಗುಲಿ ಕಂಸಂ [1] ||೩೨||

ಮನೆಮಱೆಯೊಳ್ಮಾಡಿದ ಕಂ |
ಸನ ಪೊಲ್ಲಮೆ ಮುಟ್ಟಿದತ್ತು ಮುಗಿಲಂ ಪೊಗೆ ಧೂಮಂ ||
ಕನೆ ಪೊಱಮಡುವವೊಲಡುಗೆಯ |
ಮನೆಯಿಂ ಲೇಸಾಗಿ ಬೆಳಗಿನಂ ತೊಳಗಿರ್ಕುಂ ||೩೩||

ಪುರುಷರ್ ಮಾಡಿದ ಪುಣ್ಯಂ |
ಪರೆಯದು ನೀರೊಳಗೆ ಬಿಟ್ಟ ಘೃತಬಿಂದುವಿನಂ ||
ತಿರೆ ತೋರ್ಕುಂ ನೀರ ಪೊಯ್ಲಲ್ |
ಪರೆಗುಂ ಬಿಟ್ಟಂತೆ ತೈಲಬಿಂದುವನದಱೊಳ್ ||೩೪||

ವ|| ಅಂತು ಮೂಱುಗೆಯ್ದು ಋತುಗಳಂ ಪಡೆವ ಪೃಥ್ವಿಯಂತೆ ಋತುಮತಿಯಾಗಿ ದೇವಕಿ ಪೆತ್ತ ಮಕ್ಕಳನತ್ತ ನೈಗಮದೇವನೆತ್ತಿಕೊಂಡುಯ್ದಂ ಇತ್ತ ನಿಷ್ಕರುಣನಾದೇವಸಿಕ್ಕಿದ ಮಾಯದ ಮಕ್ಕಳನೆ ಮೊಕ್ಕಳಂ ಮುಳಿದು ಶಿಲೆಯೊಳೊಗೆದಾಱ್ ಪರಪಿ ಕೆಯ್ಯ ತೊಡೆದುಕೊಂಡು ಮುನಿಯ ಮಾತಂ ತೊಡೆದೆನೆಂದು ಕೊಲೆ ಪುಸಿಯನ್ನದತಿಮುಕ್ತಕನಾದೇಶಮ ಪುಸಿಯಾದುವೆಂದವು ತನಗೆ ತಪ್ಪಿದಪಮೃತ್ಯುಗಳೆಂದಱಿಯದೆಯುಂ ಕಂಸನತ್ಯಧಿಕಾಂಸನಾಗಿ ನಿಶ್ಚಿಂತಮಿರ್ದಂ ಇತ್ತ ಕೃತಕಾಕ್ರಂದಕಂದಳಿತಶುಷ್ಕಶೋಕಾಕ್ರಾಂತಜೀವದ್ಯಶೋವಿಶ್ರೀಷಾವಿಷಾದ ಸಚಿಪ ಸೂಚಿತ ಪ್ರಸೂತಿಸಮಯಸಮುದ್ಭೂತ ಪುತ್ರಾವಿದ್ಯಾವರೇಣ್ಯೆಯುಮಶರಣ್ಯೆಯುಮಂತರ್ನಿಗೂಢಗಾಢಶೋಕ[1]ಪಾವಕಿ[1]ಯಪ್ಪ ದೇವಕಿ ತದ್ವೃತ್ತಾಂತಮೆಲ್ಲಮಂ ಅಲಕ್ಷನಱಿದು,

ಅಸಕಳಿದೞಲುಂ ಬಸಿಱೊಳ್
ಕುಸುಂಬೆವುರಿಯುರಿಯೆ ಸತ್ತಳ್ತ್ತೞ್ ಬಸಿಱಂ
ಪೊಸೆದಳ್ ಜಗಿದಳ್ ನೀಡುಂ |
ಬಿಸುಸುಯ್ದಳ್ [2]ನುಡಿದು[2] ಕೆಡೆದು ಬಿದಿಯಂ ಬಯ್ದಳ್ ||೩೫||

ಪಾ. ಭೇ—1. ಪಾಂಕಿ 2. ಮಡಿದು.

ವ॥ ಬಯಲ್ವಾರುಮಿಲ್ಲದ ಪೋಟ್ಟು ಪೋಯ್ದುಕೊಂಡ ಬಸಿಱ ಬಾಸುಳ್ಗಳ್ ತಗಟಂ ಪತ್ತಿಸಿದಂತಾಗೆ ಮಾಣದೊಳಗೊಳಗೆ ಮಾಗಟ್ಟಿಯಟ್ಟಟ್ಟು ಮುಸುಡು ಮಡಕೆಯನಿಟ್ಟಂತಾಗೆ ಬೆಂದ ಬಸಿರ್ವಾೞ್ತೆಯಾಗೆ ಪೆತ್ತುಂ ಮಕ್ಕಳ ಮೊಗಂ ನೋಡದೆಯುಂ ಸತ್ತ ಕೂಸನಾದೊಡಮೆತ್ತಿಕೊಳ್ಳದೆಯುಂ ಬಳಗಂ ಬಳಸಿ ಸುತ್ತಿ ಕೊಳ್ಳದೆಯುಂ ಮೇಲೆ ಪೊರಟ್ಟಿದೆಯುಂ ಕರೆಯದೆಯುಂ ಪೂೞ್ಕೊಂಡು ಪೋಗದೆಯುಂ ಎಮ್ಮಬಾೞ್ವೆಯುಂ ಮಕ್ಕಳ್ವೇಡದು ಮಟ್ಟುವಡೆಯದಿನ್ನುಂ ಮನೆಯೊಳಪುರ್ದಱಿಂ ಬಂಜೆಯಪ್ಪುದುಂ ಬಿಂಜದೊಳಪ್ಪುದುಮೊಳ್ಳಿತ್ತೆಂತಿರುಳ್ ನಿದ್ರೆಯುಂ ಪಗಲ್ ಪಸಿವುಮಿಲ್ಲದೆ ಮಮ್ಮಲಂ ಮಱುಗಿ ಮನ್ಯುಮಿಕ್ಕು ಗದ್ಗದಕಂಠೆಯಾಗಿರ್ದೊಂದು ದಿವಸಂ ಅತಿಮುಕ್ತಕಮುನಿಯಂ ನಿರಿಸಿ ಕಣ್ಣ ನೀರೊಳ್ಕಾಲಂ ತೊಳೆದು 'ನೀರೞ' ಕೆಯ್ಯೊಳಿಕ್ಕಿ ಮುಸಿದಂತೆ ಕಾಲ ಮೇಲೆ ಬಿರ್ದು ಕಾಪರೆ ಕಣೆಗೊಳ್ವರೆ ತಾಯೆ ರಕ್ಕಸಿಯಾದಳ್ ಕರುಳೆ ಪಾವಾಗಿ ಕೊಱೆದು ತಿಂದದುಪ್ಪೆಣ್ಣ ಕೂಸ್ ಕೊಂದಪುದು ಕುಡಿವ ನೀರ್ನಂಜಾದುದು ಮುಂಜೂರೊಳ್ಕಿರ್ದುದು ಕಣ್ಣ ನೀರ್ಕತ್ತರಿವಾಣಿಯಾದುದು ಬಸಿರ್ಬಱಿದಾಗೆ ಪೆತ್ತು ಪುತ್ರಮುಖಂಗಾಣದೆ ಪೋದೆನೊಂಭತ್ತು ತಿಂಗಳ್ ಬತ್ತಿ ಬಾಳುಕವಾಗಿ ಪೊತ್ತ ಬೇನೆಯುಂ ಸತ್ತ ಬೇನೆಯುಮಂ ನೀಗಲಾೞ್ತಂ ನೀವೆನ್ನ ದುಃಖಮಂ ಪರಿವಡೆ ತಲೆಯುಂ ಪಱಿಯಿಮೆಂದು ಪರೆದ ತಲೆಯುಮಾಱಿದ ಬಾಯುಂ ಬೆರಸಿಲ್ ಮರುಳ್ಗೊಂಡು ಬಾಯ್ಟಿದಳ್ವ ದೇವಕಿದೇವಿಗೆನಲದೇನುಮಿಲ್ಲ ಶಾಂತಂ ಪಾಪಂ ಪ್ರತಿಹತಮುಮಂಗಳಮದೆಂತೆನೆ:—ನೀಂ ಬೆಸಲೆಯಾಗಲೊಡನೆ ಮುಂದೆ ಮಾಯಾಶಿಶುವನಿಕ್ಕಿ ಪಲ್ಲಟಿಸಿ ಪೆತ್ತ ಮೂಱುಮಕ್ಕಳುಮನೆತ್ತಿ ಕೊಂಡು ಪೋಗಿ ನೈಗಮದೇವಂ ತಾನೆ ಯಾಱಮರ್ದನೂಡಿ ನಡಪೆ ಮುಂನವಾರುತಾಂದೋಳತಚಂದನಾಕಾಮರಸ ಸ್ರೂತಶಿಲಾತಳವೋದ ಮಗ್ನಮಪ್ಪ—

ಗಿರಿಕೂಟೋನ್ನತಮಪ್ಪ ಸೌಧತಳದೊಳ್ ವಿಶ್ವಂಭರಾಖಂಡದಂ
ತಿರೆ ನಿನ್ನಾತ್ಮಜರಿನ್ನು ಮೊರ್ವನದಟಂ ಚಾಣೂರದರ್ಪಾಪಹಂ ।
ಮುರಶೈಲಾಶನಿ ಕಂಸಕೇಳಿಮಥನಂ ಮಾದ್ಯಜ್ಜರಾಸಂಧಸಿಂ
ಧುರಸಿಂಹಂ ನಿನಗಾದಪಂ ಮಗನಿದಕ್ಕೇಕಕ್ಕ ನಿಮ್ಮುಬ್ಬೆಗಂ ॥ ೩೬ ॥

ವ|| ಅತನುಂ ತ್ರಿಖಂಡಮಂಡಳಾಧಿಪತಿಯಾದಪನೆಂದು ದೇವಕಿಯ ದುಃಖದಹನದ ಮೇಲೆ ದಯಾರಸಮುಮಂ ವಚನವಾರಿಯುಮನತಿಮುಕ್ತಕಂ ಪೊಯ್ದು ಪೋದನತ್ತಮಿತ್ತ ಕೆಲವಾನುಂ ವಾಸರಕ್ಕೆ—

ಒದವಿದ ಲತೆಗಂಕುರಗ
ರ್ಭದ ಜೆಸ್ಸಂ ಮೂಡುವಂದದಿಂ ದೇವಕಿಗು
ಬ್ಬಿದ ಗರ್ಭದ ಜೆಸ್ಸಂ ಮೂ
ಡಿದುದಾ ಕಂಸಂಗೆ ಮಿಳ್ತು ಮೂಡುವ ತೆಱದಿಂ ॥ ೩೭ ॥

ಅಸುರರ ಮೊಗದವೊಲಸಿಯಳ
ಮಿಸುಪ ಕುಚದ್ವಯಮುಖಂ ಕಱಂಗಿದುದವಳೊ
ಳ್ವೆಸಿಱ ವಳಿರೇಖೆಗೆಟ್ಟುವು
ನೊಸಲಕ್ಷರರೇಖೆಯೊಡನೆ ಮಧುರಾಧಿಪನಾ ॥ ೩೮ ॥

ದಿಕ್ಕರವೊಲ್ ಕೃಷ್ಣಂ ಮುನ್
ದಿಕ್ಕೆನೆಲಕ್ಕಾದುರ್ ಬಿದುರ್ ಕಂಸಂ ಮಣ್ಣಂ
ಮುಕ್ಕಿದಪನೆಂದು ಪೇೞ್ದಪ
ಳಕ್ಕುಮೆ ವಸುದೇವನರಸಿ ಮಣ್ಣಂ ಮೆದ್ದಳ್ ॥ ೩೯ ॥

ತವಕದೆ ಕಂಸಂ ಕೆಯ್ನೀ
ಡುವನಾದೊಡೆ ನುಂಗಲೆಂದು ಗುರುಗರ್ಭನಿಧಾ
ನವನೇಳ್ ಕಾವ ಕಾಳಾ
ಹಿವೊಲಿರ್ದುದು ರೋಮರಾಜಿ ರಾಜಾತ್ಮಜೆಯಾ ॥ ೪೦ ॥

ಸಿಂಧುಪರೀತಭೂತಳಮನೀೞ್ದುಕೊಳಲ್ ಕರಚಕ್ರದಿಂ ಪರಾ
ಸುಂಧನ ಕಂಠಮುಂ ಕಡಿಯೆ ಕೇಶವನಿಟ್ಟಪನೆಂದು ತೋರ್ಪವೊಲ್ ॥
ಗಂಧಗಜೇಂದ್ರಯಾನೆ ಕಡುಮೇಳದ ಕುಬ್ಜಕಿರಾತರಾನವು
ತ್ಕಂಧರಮುಂ ಕರಂ ತಿರಿಪ ಕಂಕಣದಿಂದಿಡುವಳ್ ವಿನೋದದೊಳ್ ॥ ೪೧ ॥

ವ|| ಅಗರ್ಭಶಾಂತಿಕಕ್ಕೆ ಶಾಂತ್ಯುದಕಮಂ ತಳೆವಂತೆ—

ಅಲರ್ವಲಗೊಂಚಲಂತಲುಗೆ ಮಿಂಚು ಪಿಕಂ ನಲಿವಂತೆ ಚಾತಕಂ ।
ಜಲಕಣಯುಷ್ಟಿಯೊಳ್ ಕಳಕೆಗಜ್ಜೆ ಕರಂ ಸೊಸಸೋರ್ವ ಭಂಗಿಯಿಂ ॥

ಬಲವರೆ ಸೋಗೆ ಗೊಂಚಲಿಸಿ ಕೆಂದಳಿರೊಳ್ಗಳಪಿಂಡು ಪಾಯ್ದುದಂ |
ಸಲಿಸೆ ಸುರೇಂದ್ರಚಾಪಲತೆ ಬಂದುದು ಕಾರೆಳಮಾವಿನಂದದಿಂ ||೪೦||

ವ|| ಆಮಾೞ್ಗಾಲದೊಳಭಿಷೇಕದೊಳಭಿಮತಮಂ ದಾನದೊಳ್ ಧನಮಂ ಪೂಜೆಯೊಳ್ ಪೊತ್ತಂ ಕೞಿಯುತ್ತುಮಿರ್ದಾಪುಣ್ಯಸತಿಯ ಪುಣ್ಯದಂತೆ ಪುಣ್ಯಯುತಿಗಳಂ ಕೇಳ ತಿಂಗಳ್ ತೀವೆ ಕಂಸಭಯದೆ ಗರ್ಭಂ ಕಲಂಕಿದಂತೆ ಬಸಿರ್ಮಸಗೆ ತನ್ನ ತನಯಂ ಭದ್ರಪದನಕ್ಕುಮೆಂಬುದಂ ಪೇೞ್ವಂತೆ ಭಾದ್ರಪದದೊಳ್ ಮುಳಿಯಿಸಿದರ್ಗೆ ವಿಳಯಕಾಳನಕ್ಕುಮೆಂಬುದನಱಿಪುವಂತೆ ಕಾಳದೊಳ್ ದುಷ್ಟಚತುಷ್ಟಯಕ್ಕಷ್ಟಮಚಂದ್ರಮನಕ್ಕುಮೆಂಬುದಂ ನಿವೇದಿಸುವಂತಷ್ಟಮಿಯೊಳರ್ಧಚಕ್ರವರ್ತಿಯಕ್ಕುಮೆಂಬುದಂ ಸೂಚಿಸುವಂತರ್ಧರಾತ್ರದೊಳ್

ಅಳಿಯುಂ ಪದ್ಮಿನಿ ವಾರ್ಧಿವೇಳೆ ವಿಷಮುಂ ಕಸ್ತೂರಿಯುಂ ಪುಲ್ಲೆ ಕ |
ಜ್ಜಳಮುಂ ದೀಪಿಕೆ ಕಾಳರಾತ್ರಿ ತಮಮುಂ ನೀಲಾಶ್ಮಮುಂ ರೋಹಣ ||
ಸ್ಥಳಿ ಭೂದೇವಿ ತಮಾಳಮುಂ ಪಡೆವವೋಲ್ ನಾನಾಹಿತಾಂಕೂರಕಂ
ದಳನಂ ದೇವಕಿ ಲೀಲೆಯಿಂದೆ ಪಡೆದಳ್ ಕಂಸೋಷ್ಣನಂ ಕೃಷ್ಣನಂ ||೪೧||

ವ|| ಆಪ್ರಸ್ತಾವದೊಳ್ ಕಂಸನಱಿಗುಮೆಂ ಬದ್ದೆವೆಂದು ಒದ್ದವಣಂ ಬಾಜಿಸುವ ದೇವದುಂದುಭಿಧ್ವನಿಗಳೊಳ್ ಘನಾಘನಧ್ವನಿಗಳ್ ತಡಂಗಲಿಸೆ ದೇವಕಾಂತೆಯರ್ ನಿವಳಿಸುವ ಮಂಗಳದೀಪಮಂಜರೀಮರೀಚಿಗಳೊಳ್ಮಿಂಚಿನ ಗೊಂಚಲ್ಗಳೊಡಗಲಿಸೆ ಸೂಸುವ ಮುತ್ತಿನ ಸೇಸೆಗಳೊಳಾಲಿಕಲ್ಗಳ್ಕರೆಗಲಿಸಿ ಕೊಳ್ವ ಮೞೆಯೊಳಾನಂದಬಾಷ್ಪವರ್ಷಮೊಡಂಗಿ ಪೋಗೆ ಸಮಸ್ತತ್ರೈಲೋಕ್ಯಕ್ಕಮಧಿಕೋತ್ಸವಂ ಪುಟ್ಟೆ —

ಸೊಡರ್ವೆಳಗಂ ಮಸುಕಿದನಾ
ಗಡೆ ತನ್ನಯ ತನು ತಮಾಳರುಚಿಯಿಂದಂ ಮೇ ||
ಲ್ಗಡೆದಿತ್ತಾನುಮಪೇೞ್ದಂ
ದೊಡೆ ಕಂಸಂ ಕಾಣ್ಗುಮೆಂಬ ತೆಱದಿಂ ಕೃಷ್ಣಂ ೪೨

ವ|| ಅತಂ ಕಾರಣಪುರುಷನಪ್ಪ ಕಾರಣದಿಂ ಸಹಜಘನಸಂಹನನಾಗ ಸಾಮಾನ್ಯಶಿಶುವಿನಂತೆ ಕಲಲಚ್ಛಾಯನಾಗದೆ ಪರಿಣತಚ್ಛಾಯೆ ನಟ್ಟು

ನಿಲೆ ನೀಲಶಲಾಕೆಗೆ ಜೀವಂಬೊಯ್ದಂತಿರ್ದ ಕೃಷ್ಣಮೂರ್ತಿಯಂ ಕಣ್ದೀವಿ ಕಾಣಲ್ಪಡೆದು ಕುರುಡಂ ಕಣ್ಬಡೆದಂತಾಗಿ ನಿಧಾನವನೆತ್ತಿ ಕೊಳ್ವಪ್ಪೋಲಿರಳುಮೆಯ್ಯೊಳ್ ಬೇಗಮೆತ್ತಿಕೊಂಡು ಕೆಯ್ಯಿಂ ಪಿಡಿವಂತೆ ಪದುಳವಾಗಿ ಪಿಡಿದು ವಸುದೇವಂ ವಾಸುದೇವನಂ ಪೊಱಮಡಿಸಿ ಕಾಳಿಂದಿಯೊಳೋಲಾಡಲ್ ಕಲಿಸುವಂತೆ ಕಾಳದ ಕತ್ತಲೆಯೊಳ್ ತಳಂಗಳೊಳ್ ತಳೆದಂ । ತಳರ್ವಾಗಳ್ ಮುಕುಂದನ ಮೇಲೆ ನಾಗಂ ಸಹಜಸ್ನೇಹಸಂಭ್ರಮದಿನೆೞ್ತಂದು ನೀಲವಸನಮಂ ಮುಸುಂಕಿಕೊಂಡೇಕಕುಂಡಲನೋಲೆಯ ಕೊಡೆವಿಡಿದು ತಾಳಧ್ವಜನಾಗಿ ತೋಱೆ ಪುರುಷೋತ್ತಮನ ಪುಣ್ಯಪ್ರೇರಣೆಯಿಂ ತನ್ನ ಮೇಲೆ ಕಾಲೂಱದಂಜಿದಂತೆ ಜೀಮೂತವ್ರಾತವಾಸಾರವನುಡುಗಿ ಕಟ್ಟ ಕುಡುಮಿಂಚಿನ ಕೆಯ್ದೀವಿಗೆವಿಡಿದು ಮುಗಿಲ್ಗಳೆ ಮುಂದುರುವರಿಯೆ ಪರಿವ ಪೊನಲ್ಗಳೆ ಪಡಿಯಱರಾಗಿ ಮಾರ್ಗಂಬಿಡಿದು ನಡೆಯಿಸಿ, ತಮ್ಮೊಡವೆಗೆ ತಾವೇ ಕಳ್ಳರಾಗಿ ಗಳಗಳಿಸಿ ಪೋಗಿ ಪೆರ್ವಾಗಿಲಂ ತಾಗೆ ಬಂದು ಬಿಯ್ಗವಿಕ್ಕಿ ಚಿಕ್ಕಟಂ ನುಸುಳಲ್ಬಾರದಂತಾಗಿ ಬಿಗಿಯೆ ಕೆತ್ತಿದ ಕರ್ವುನದ ಪಡಿಗಳಂ ಕಂಡರ್ವರುಮಿನ್ನೇವೆವೆಂದುಮ್ಮಳಿಸಿ ಮಮ್ಮಱಿಗೊಳುತ್ತುಮಿರ್ಪನ್ನೆಗಂ ಸ್ವರ್ಗಕಸರ ಸ್ಪೃಷಿಸಿಂ ಸಗ್ಗದ ಪಡಿಗಳ್ ತೆಱೆವ ತೆಱದಿನಾಶಕಟಘುರಟ್ಟನುಂಗುಷ್ಠಂ ಮುಟ್ಟಲೊಡನೆ ಕಿತ್ತು ಪಡಿಗಳ್ ತಮಗೆ ತಾವೆ ತೆಱೆಯೆ ಬೆಱಗಾಂತ ಬಾಗಿಲ್ಗಾಪಿನ ಜಾವದುಕ್ಕಡದ ಗರವಟ್ಟಿಗೆಯ ತಾಣಾಂತರದವರೆಲ್ಲಮೆರಡು ಕೆಯ್ಯನೆತ್ತಿ ಪುಂಡರೀಕಾಕ್ಷಂಗೆ ಪೊಡೆವಟ್ಟು ಮಾಟದ ಮಾನಸರಂತೆ ಮಿಳುಮಿಳನೆ ನೋಡುತ್ತಿರೆ ಮಾರಿಯ ಬಾಯಿಂ ಪೊಱಮಡುವಂತೆ ಮಧುರೆಯ ಬಾಗಿಲಂ ಪೊಱಮಟ್ಟು ಬಟ್ಟೆಗಾಣದೆ ದಿಗ್ಮೂಢರಾಗಿ ನಿಲಲುಂ ಸರಸರಿಸಿ ಪೋಗಲುಮಱಯದೆ ಕುಱುಕುಱುಮುಟ್ಟುತ್ತುಮಿರ್ಪಿನಂ—

ಪೆಡೆವಣಿಯ ಫಣಿಗಳಂತಿರೆ
ಸೊಡರಂ ಪೊತ್ತಿರಡು ಕೋಡು ಕೆಲದೇಂ ಮುಂದಂ ॥
ನಡೆದುದು ಧವಳವೃಷಂ ಮಾ
ರ್ಗಡೆಯುಂತಿರೆ ನಾಲ್ಕು ಕಾಲಫಣಿಭೀಷಣಮಂ (?) ॥೪೫॥

ವ || ಆಜ್ವಲದುಜ್ಜ್ವಲದೀಪಕಳಿಕಾಂಕುರಿತಪಪಾಣಸಪ್ಪ ವೃಷಭನ ಬೆನ್ನನೆ ಪತ್ತಿ ಪೋಗೆ ಪೋಗೆ—

ಇದು ನೀಲಾಂಭೋದಜಾಳಂ ಪರಿದಪ್ಪುದೊ ಮಹೀಭಾಗದೊಳ್ ವಾಮ
[ನೋದ್ಯ |
ನ್ಮದಪೂರಂಧಾತ್ರಿಗೇಱುಂದುದೊ ಕವಿದು ವಿಹಾಯೋಮೃಗಂ ಭೂಮಿಗೇಂ||
ಕ್ಕಿದುದೋ ಕಸ್ತೂರಿಕಾಸ್ರೋತಮನೆನಗೆ ತೊಡಂಕಾಯ್ತು ಪೇೞಿಂಬಿ
|ನಂ ಬಂ |
ದುದು ಭೋರೆಂದಂದು ಕಾಳೋರಗತರಳತರಂಗಾಳಿ ಕಾಳಿಂದಿ ಮುಂದಂ ||

ಒಲೆಗಱಿವ್ರೋಯ್ತು ಜಲಕ |
ಲ್ಲೋಲಂಗಳನಬ್ಧಿಯೆಂಬ ಬಾಸಿಗದತ್ತಲ್ ||
ಕಾಲಿಂದ ಮೊರೆವ ತುಂಬಿಯ |
ಮಾಲೆಯುವ್ರೋಲ್ ಮೊರೆದು ಸರಿಯತಿರ್ದತ್ತಾಗಳ್ ||೪೭||

ವ|| ಅದಂ ಕಂಡಮೊ ಪ್ರೆಸ್ಸುಪರಂಪರಾ ಎನುತ್ತು ಪೂರ್ವರುಮು ಬ್ಬೆಗಂಬಡುತ್ತಿರ್ದ್ದವರೆ ಮುಂದಾಬಸವಂ ಪಸಲೆಯುಂ ಪುಗುವಂತೆ ಜಗು ನೆಯುಂ ಪೊಕ್ಕು ಪಾಯ್ದು ಪೋಗೆ—

ಬಾಲಕನ ಮಹಿಮೆಯಿಂದಂ
ಕಾಲಿಂದಿಯ ನೀರ ಮೇಲೆ ನಡೆಪ್ರವು ಮುದದಿಂ
ನೀಲದ ಪೊಸನೆಲೆಗಟ್ಟಿನ
ಮೇಲೊಯ್ಯನೆ ನಡೆವ ತೆಱದೆ ಪರಿಕುಲತಿಲಕಂ ||೪೮||

ತರಳತರಂಗ ಮುಂಪೆ ತೆಱದಂತೆವ್ರಲಿಬ್ಬಿಗಿಯಾಗ ಬೇಗದಿಂ
ಪರಿಯುಡುಗಿದ ಪೂರ್ಣಯಮುನಾನದಿಯುಂ ಪವನಾಭಿಗಾತದಿಂ |
ಪರಿವ ಪಯೋದಮಾಲೆ ಪರಿದೊಂದೆಡೆಯಿಂದಡಿಪಿಟ್ಟು ಪೋಪ ಖೇ
ಚರರೆನೆ ಪಾಯ್ದು ಪೋದರೊ ಹಲಾಯುಧನುಂ ವಸುದೇವಭೂಪನುಂ ||

ವ ಎಂಬಿನಮೊಂತಕ್ಕೆ ಪಾಯ್ದುದುಮಾತೊಱಿಯು ತಡಿಯು ತುಱು ಪಟ್ಟಿಯುಂ ತೋಱಿ ಗೋಪತಿ ಗೋಕುಲಮುಂ ತೋಱುವುದುಚಿತಮೆನಿಸಿ ಬಸವನಪ್ಪೃಶ್ಯಮಪ್ಪುದುಮುವರ ಪ್ರಣ್ಯದೇವತಾಯತನದಂತೆ ಮುಂದೊಂದು ದೇವಾಯತನಮಿರ್ದುದದನವರ್ಪೊಕ್ಕು ಪೋಗಂ ನೋೞ್ಪಾಗಳಲ್ಲಿಗೆ ಮ

ತ್ತೊರ್ವಂ ದೀವಿಗೆವೆರಸು ತೇರ್ರೈಸಿ ಬರ್ಪುದಂ ಕಂಡು ತಮ್ಮ ಪಜ್ಜೆವಿಡಿದು ಬೆನ್ನಟ್ಟಿ ಬಂದ ಕಂಸನೆಂದೇ ಬಗೆದು ಭಯಂಗೊಂಡು ಮೆಯ್ಗರೆದಿರ್ಪಿನ ಮಾತನಾತುೞುವಟ್ಟಿಗೆಱೆಯನಪ್ಪ ನಂದನಾದಂ। ಅವನುಂ ತಮ್ಮ ತೆಱದಿ ನಾಗಳೆ ಪುಟ್ಟಿದೊಂದು ಪೆಣ್ಗೂಸಂ ಪಿಡಿದು ಬಂದು ದೇವತೆಗಿಂತೆಂದಂ:—

ಕಿತಕಂ ದೇವತೆಗೇಕೆ ಪೇೞ್ ಪರಸಿ ಗಂಡಂ ಬೇಡಿಕೊಂಡೆನ್ನ ಪೆಂ ।
ಡತಿಗಿತ್ತ್ರೈ ಪುಟ್ಟಿತೊಂದು ಪೆಣ್ಣಿದನೊಲ್ಲಳ್ನೀನೆ ಕೊಳ್ಳಾದ ದಾ ॥
ವತಿಯಕ್ಕುಂ ತುೞುಗಾೞರೇಂ ಪಡಸಿ ಕೊಂಡುಂಡಪ್ಪರೇ ಬಳ್ಳತೊ ।
ಳ್ಳತು ಪೆಣ್ಗೂಸಿದು ಕಾಯಲೋ ಕರೆಯಲೋ ಬೆನ್ನಟ್ಟಲೋ ಕಟ್ಟಲೋ॥

ವ॥ ನಚ್ಚೆನೆರ್ಪು ಕೋಣಂಗೀದಂತಾದುದು। ನೀನುಂ ಪೆಣ್ಣಪ್ಪುದಱಿಂ ಪೆಣ್ಣನೀವೆಯಲ್ಲದೆ ಗಂಡಂ ಕರ್ದು ತಪ್ಪಾ। ನಿನ್ನ ಪೆಣ್ಣಂ ಕಳ್ಳೆ ನೀನೆ ಕೊಳ್ಳೆನ್ನ ಪೆಂಡತಿ ನೋಂತು ಪಸಿದುಂ ಪಾಱುಂಬಟ್ಟುಂ ಕೊಟ್ಟ ಪರಕೆಯುಂ ಮಗುಳೆ ಕುಡುಕುಡದೆಂದು ನಿನ್ನನೀಮನೆಯೊಳಗೆ ದಿಟದ ದೇವತೆಯುಂತೆ ಮಲಗಿ ಮಲ್ಲಂತಿಗಿೞಿದು ಕುಳ್ಳಿರಲೀಯೆಂ। ವಿಷ್ಣುಗುಪ್ತಂ ಲಿಂಗದ ನೆತ್ತಿಯೊಳಕ್ಕಿದಂತೆ ಪಿರಿಯ ಕರಿಯ ಕಲ್ಲನೆತ್ತಿ ತಂದು ನಿನ್ನ ನೆತ್ತಿಯೊಳಕ್ಕಿ ತುೞುಕಾರ್ತಿಯುರನಾಳಿಗೊಂಡು ನುಣ್ಣನೆ ನುಂಗಿದುದೆಲ್ಲಮಂ ಮೂಗಿಂ ಬಾಯಿಂ ಕಾಱಿಸುವೆನೆಂದು ಮೀಸೆಯಂ ಕಡಿದು ಕೂಸನೀಡಾಡಿ ನಂದಂ ಮಗಳ್ದು ಪೋಪಲ್ಲಿಯುವರ್ಕಂಡಱಸುವ ಬಳ್ಳಿ ಕಾಲ್ತೊಡರ್ದುದೆಂದು ದೇವತೆಯ ಮುಂಟೆ ಮಗನಸಿರಿಸಿ ಮಗಳಂ ಕಳೆದುಕೊಂಡು ವಸುದೇವಂ ಕಾರ್ಯವಶಕ್ಕೆ ಕತ್ತೆಯ ಕಾಲ್ವಿಡಿದನೆಂಬಂತೆ ಕಾಲ್ವಿಡಿದೇಂ । ಕನಲ್ದು ಪೋಗದೆ ಬಾ ಗಂಡುಗೂಸಂ ಕೊಟ್ಟಪೆನೆಂದು ಕರೆಯೆ। ತನಗಂಜಿ ದೇವತೆ ಕರೆದಳೆಗೆತ್ತು ಮತ್ತೆ ಎಂದು ನಂದನಾನಂದದಿಂ ಕಂಡಳಗೆ ಮಾಣಿಕಮಂ ಕೊಳ್ವಂತೆ ಕಳೆದುಕೊಂಡು,

ಕಣ್ಬಡೆದ ಕುರುಡನಂತಿರೆ ।
ಪಣ್ಬಡೆದಳವಕ್ಕಿಯಂತೆ ಪುಣ್ಯದ ಫಲದಿಂ ॥
ಪೆಣ್ಬಡೆದ ಸೂಳೆಯಂತಿರೆ ।
ಜಾಣ್ಬಡೆದೊಕ್ಕಲಿಗನಂತೆ ನಲಿದಂ ನಂದಂ ॥೫[illegible]॥

ವ॥ ಇಂತಾದೊಡೆ ನೀನೆ ದೇವತೆಯೆಂದು ಪೊಡೆವಟ್ಟು ಪೋಗಿ ಯ

ಶೋಧೆಗೆ ಕೊಟ್ಟನಿತ್ತಲಾಬಾಲಕಿಯುಂ ದೇವಕಿಯ ಮುಂದೆ ತಂದಿಕ್ಕೆ ತಂದಿರ್ವರುಂ ತಾಮುೞಿಯದಂತಿರೆ ಕಂಸಂ ತನ್ನ ತಂಗೆ ಬೆಸಲೆಯಾದುದನಱಿದಾಬ್ಬೈಗಿರುಳ್ ಬಂದನುಜೆಯ ಮುಂದಣ ತನುಜೆಯುಂ ಕಂಡು ಕೊಲಲೊಲ್ಲದೆ ಇವಳೊರ್ವಳಣ್ಮಳಾಣ್ಮನೆತ್ತಾನುಮಪ್ಪೊನಾದೊಡೆಯಾತನೆನಗೆ ಮಾರಿಯಪ್ಪನೆಂದಾಕೆಯ ಮೂಗನಡಂಗೊತ್ತಿ ಪೋದನಾಕೆಯುಂ ತನ್ನಂ ತಾನಱಿದಿಂಬೞಿಕ್ಕೆ ಮೊಗಮಂ ನೋೞ್ಪರ ಮೊಗಕ್ಕೆ ನಾಣ್ಚಿ ವಿಂಧ್ಯಮಂ ಪೊಕ್ಕು ವಿಂಧ್ಯವಾನಸೆಯೆಂಬ ದೇವತೆಯಾದಳಿತ್ತಲಂದಾನಂದನಮಂದಿರದೊಳ್ ಮಹೋತ್ಸವಂ ಮಾಡಿ,

ಕುೞಿಯೊಳ್ ನಾಟಿಸಿ ನೀರಂ |
ಗೞಿಗೞಿನೆಱೆವಂತೆ ಫಲಿತಲತೆಗಚ್ಯುತನಂ ||
ಕುೞಿವೊಕ್ಕು ಕೊಂಡ ಜಸದೆಗೆ |
ನೆೞಲೊಳ್ಗೋಪಿಯರೆ ಮೀಯಲೊಲವಿಂದೆಱೆದರ್ ||೫೨||

ಅರಿಸಿನದಂಚೆಯುನಿಸಿಸೋ |
ಸರಿಸಲುಮೀಯದೆ ಯಶೋದೆಯಿತ್ತಲ್ ಪೀತಾಂ ||
ಬರನೆಂದು ಧರೆಗೆ ಪೇೞ್ವಂ |
ತಿರೆ ಪೊಕ್ಕುೞೊಳಿಕ್ಕಿದಳ್ ಪಯೋಜೋದರನಂ ||೫೩||

ನಲಿದೊಡವುಟ್ಟಿದ ಮುಂಗೈ |
ವಲಮೆಂಬೆಳಗೂಸು ಕೂಡೆ ಕಣ್ದೆಱೆದವೊಲಾ ||
ಜಲಜಾಕ್ಷನ ಮುಂಗೆಯ್ಯೊಳ್ |
ಜಲಜಲಿಸೆ ಯಶೋದೆ ಕಟ್ಟಿದಳ್ಕವಡಿಕೆಯುಂ ||೫೪||

ನಲಿನಿಯ ಬಿರಿಮುಗುಳೊಳ್ಪಾ |
ಯ್ದಲಿಕಲಭಂ ಬೆಂಡುನೆಗೆದು ಬಂಡುಣ್ಬವೊಲಂ ||
ದಲೆದಲವಲಿಸಿ ಯಶೋದೆಯ |
ಮೊಲೆಯುಂಡಂ ನವತಮಾಲಕೃಷ್ಣಂ ಕೃಷ್ಣಂ ||೫೫||

ಮೃಗಗಂತಿರೆ ಮಗಮಗಿಸುವ |
ಸುಗಂಧವರತೈಲತೃಣದ ಮೇಪಿನ ಸೊಡರ್ವೆ* ||

ಕ್ಕುಗಳಿಂದೆ ಬೊಟ್ಟನಿಟ್ಟಳ್
ಮೊಗದೊಳ್ಕಸ್ತುರಿಯ ತಿಲಕದಂತಿರೆ ಹರಿಯಾ ||೪೬||

ಪಿಡಿದಡಸಿ ಕಂಸನಿದಿರೊಡ |
ಮೊಡೆವಿನಮೊದೆದೊದೆದು ಗುದ್ದಿಗುದ್ದಿಯೆ ಕೊಲಲೆಂ ||
ದಡಿಹಡಿಸುವಂತಿರಿರ್ದುವು |
ಪಿಡಿಕಯಿಸಿದ ಕೆಯ್ಯುಮೊದೆವ ಕಾಲುಂ ಹರಿಯಾ ||೪೭||

ಅರಗಿಳಿಯುಂ ಮಾಣಿಕಮಂ |
ಉರದೊಳಗಿರಿಸುವವೊಲಿರಿಸಿ ಮಣಿದೊಟ್ಟಿಲೊಳಾ ||
ಮರಕತವರ್ಣನನುತ್ಸವ |
ಭರದಿಂದೆ ಯಶೋದೆ ಪಾಡಿದಳ್ ಜೋಗುಳಮಂ ||೪೮||

ಜೋ! ನಳಿನಾಕ್ಷ ಜೋ! ಭುವನವಲ್ಲಭ ಜೋ! ನಯನಾಭಿರಾಮಜೋ |
ಜಾನಕಿಯಾಣ್ಮ ಜೋ! ಜನಮನೋಹರ ಜೋ! ಜಗದೀಶಕೃಷ್ಣ ಜೋ! ||
ಜೋ! ನರಸಿಂಹ ಜೋ ಡಜುದಿರಾ ಮೊಲೆಯುಂ ಪಿಡಿ ಹೋಯಿಯೆಂದು ಚಂ |
ದ್ರಾನನೆ ತೊಟ್ಟಿಲಂ ತೊನೆದು ತೂಗುತುಮಾಡಿ ಯಶೋದೆ ಪಾಡಿದಳ್ ||

ಎಳವೆಯ ಮುದ್ದುಂ ರೂಪುಂ |
ಬಳೆಯಿಸೆ ಮೋಹನಮನವಗಮನದೊಳ್ ಮದನಂ ||
ಬಳೆದಂತೆ ಬಳೆದು ಕೃಷ್ಣಂ |
ಬಳೆದಂ ಗೋಪಿಯರ ತೋಳ್ಗಳೊಳಂ ತೊಟ್ಟಿಲೊಳಂ ||೫೦||

ಜೆಣ್ಣಂ ಪೊಸಮೆಂಡಿರ ಕಡೆ |
ಗಣ್ಣಲಸದೆ ತೊಡರ್ದ ತಮ್ಮ ಕಡೆಗಳ ಕಪಿಲಂ ||
ನುಣ್ಣನಿರೆ ಕರಿಯಸೆಯ್ದಿಲ |
ಬಣ್ಣಂಬೊಯ್ದಂತೆ ಕರಿಯ ರೂಪಿನೊಳೆಸೆದಂ ||೫೧||

ಯುವತಿಯುರನೊಲಿಸಿದಂ ಶೈ |
ಶವದೊಳ್ ಕೇಶವನದೊಂದೆ ಪೂಗಣೆಯಪ್ಪ ||
ನ್ನೆವರಂ ನಿಂದುದು ಬಗೆ ಬೆದ |
ಱುವಿನಂ ನನೆಗಣೆಯೆ ತಾಗಿ ತನ್ನಲಿಸದೇ ||೫೧||

ವ|| ಮತ್ತಿತ್ತ ಮಧುರಾಪುರದೊಳ್;

ಪಗಲುಳ್ಕುಂ ಬಿರ್ದುದುರ್ವೀರುಹವೊಳಱಿದುವಳ್ಕಿಡಿದತ್ತು ದ್ವಿಜಾಲಂ |
ಪೊಗೆದತ್ತಾಕಾಶಮುಂ ಮೇದಿನಿ ಮೊೞಗಿದುದಾಕಸ್ಮಿಕಂ ಭಸ್ಮಮಾಯ್ತಾ ||
ವಗ ವಹ್ನಿವ್ರಾತಮೊರ್ದಾರ್ದುದು ಮರುಳ್ದುಳೋರಂತಿರಿಕ್ಕಿತ್ತು ಬಾಷ್ಪಾಂ |
ಬುಗಳಂ ಘೋರೆಂದು ದೇವಪ್ರತಿಮೆಗಳ್ ಪರಿಶ್ರಾಂತನೇತ್ರಪ್ರತಾನಂ ||

ಉಡಿದತ್ತುಗ್ರಾಸಿ ಬೆಂದತ್ತರಮನೆಯುರಿದತ್ತಾತಪತ್ರಂ ತದಶ್ವಂ |
ಮಡಿದತ್ತಾವ್ರೊಲಿರ್ದತ್ತವನ ಕರಿಯುರುಳ್ದತ್ತು ಸಿಂಹಾಸನಂ ಗೋ ||
ಳ್ಗೆಡೆದತ್ತಾಳಾನಮುಕ್ಕಿತ್ತೆಸೆವ ಕಸವರಂ ಕಂಸನಿಟ್ಟುಂಬ ತಟ್ಟೋ |
ರ್ಗುಡಿಸಿತ್ತೆಱ್ಗಿತ್ತು ಮಂಚಂ ನಡನಡನಡುಗಿತ್ತಾತನೇಱಿರ್ದ ಮಾಡಂ || ೬೪ ||

ಅೞ್ತುವು ಗೃಹದೇವತೆಗಳ್ |
ಮುೞ್ತುವು ಕಿವಿಯೋಲೆ ಬೞಿದೆ ಬಾಷ್ಪಾಂಜಲಿಗಳ್ ||
ಬೀೞ್ತಂದುವು ಕಣ್ಗೞ್ವುದುವೇ |
ೞ್ತಂದುವು ಪೊಲ್ಲಗನಸು ಜೀವಂಜಸೆಯಾ || ೬೫ ||

ಪೇೞಲ್ಬಾರದು ಮನದೊಳ್ |
ಪೋೞಲ್ಬಾರದು ಒರುಂಟೆ ಕೇಳ್ದವರಾರುಂ ||
ಬಾೞಲ್ಬಾರದ ಕನಸಂ |
ಬೀೞಲ್ಬಳೆವಂತೆ ಬಳೆಯೆ ಕಂಸಂ ಕಂಡಂ || ೬೬ ||

ವ|| ಕಂಡೇವಯಿಸಿ ವರುಣನೆಂಬ ನೈಮಿತ್ತಿಕನಂ ಕರೆದು ಬೆಸಗೊಳ್ವುದುಮಾತಂ ಕಿವಿಗೆ ಮಾತಿಕ್ಕದ ಮುನ್ನಮೆ ಕಣ್ಬನಿಯನಿಕ್ಕಿ ದೇವಕಿಯ ಮಗನೊರ್ವಂ ಪೆರ್ವುೞಿದು ಬಳೆದಪನೆಂದು ಬಗೆಯೊಳ್ ಪಗೆಯನಿಕ್ಕಿ ಪೋಗೆ ಪೊಯ್ವಲ್ಪಡೆವ ತಾಗಿ ತನ್ನೊಳಿಂತೆಂದಂ:--

ನರನೆಚ್ಚಂಬುಂ ಕವಿಶೇ |
ಖರದೇವಂ ಪೇೞ್ದ ಕಬ್ಬಮುಂ ಬಿದಿ ನೊಸಲೊಳ್ ||
ಬರೆದಕ್ಕರಮುಂ ಪರಿಕಿಸೆ |
ಪರಮತಪೋಧನರ ವಾಕ್ಯಮುಂ ತಪ್ಪುವುದೇ || ೬೭ ||

ಅಪ್ಪೊಂಗವಾದೊಡಂ ಮ |
ತ್ತಪ್ಪುವುದಮಂ ಕೞಿವುಪಾಯಮುಂಟೇ ಜಗದೊಳ್ ||

ದೇವಂಗಂ ದೈತ್ಯಂಗಂ ।
ಸಾವಂ ತಪ್ಪಿಸುವುಪಾಯಮಾವುದುಮುಂಟೇ ॥೭೮॥

ವ॥ ಅಶೌಚಮುಂ ಗೋವಧೆಯುಮುೞಿದುದೆಂಬಂತೆಮಗೆ ಪಾಪಮುಂ ಪೈಶೂನ್ಯಮುಮುೞಿದುದಿಲ್ಲೆಂದುಮ್ಮಳಿಸಿ ಪಟ್ಟರೆ ಪೂರ್ವಭವದಣ್ಬರ್ ದೇವತೆಯರ್ ಬೇಱೆವೇಱೆ ಬಂದು

ಆರಂ ಬಾರಿಪ್ಪೆನಾರಂ ನಿಸಗೆಱಗಿಪೆನಾರಂ ಕೊಲಲ್ಕಾಯ್ವೆನಾರಂ ।
ಬೇರಿಂದಂ ಕೀೞ್ವೆನಾರಂ ತಿರಿದು ನೊಣೆವೆನಾರಂ ತಿನಲ್ವೋಪೆನಾಟಂ ।
ದಾರಂ ಪೊಯ್ವೊಯ್ವೆನಾರಂ ಪಿಡಿದು ಪೊಸೆವೆನಾರಂ ಕರಂ ಪೋೞ್ವೆನಾರಂ ।
ನಾರಂ ಸೀೞ್ವಂತೆ ಸೀೞ್ವೆಂ ಬೆಸಸು ಬೆಸಸಲೇ ಕಂಸ ರಾಜಾವತಂಸಾ ॥

ವ॥ ಸೀನುಮ್ಮಳಿಸುವಲ್ಲಿವರಮೇನೆನೆ ಕಂಸಂ ದೇವಕಿಯ ಮಗನೊರ್ವನೆಲ್ಲಿರ್ದಪನೆಂಬುದಂ ಭೇದಿಸಿ ಕೊಲ್ಲಿಮೆಂಬುದುಮವರವನಿರ್ದ ಭಂಗಿಯುಂ ವಿಭಂಗಬೋಧದಿನಱಿದು ರಾಕ್ಷಸಪ್ರಕೃತಿಯಪ್ಪ ದೇವತೆ ನಂದಗೋಪಿ ನಂದನನಂ ತೊಟ್ಟಿಲೊಳಿರಿಸಿ ನೀರಂ ತರಲ್ಪೋದ ಪೆಱಗೆ

ಪೆಱನೊಸಲಾಗೆ ನೆಕ್ಕ ನೊಸಲೊಳ್ಕಲೆಯಪ್ಪೊಡಲಾಗೆ ನಿಟ್ಟೊಡ ।
ಲ್ಕಿೞ್ದಲೆಯಾಗೆಯೊಪ್ಪುದಲೆ ತೋಳ್ ತನಗಾಗೆ ಪೊಲ್ಲದೋಳ್ ॥
ತುಱುಗೆನೆಗಣ್ಗಳಾಗೆ ಬಿಡುಗಣ್ಗಳೆ ತೆಳ್ವಸಿಱಾಗೆ ಪೊಱ್ವಸಿಱ್
ಸಱಿವೊಲೆಯಾಗೆ ಬಿರ್ದವೊಲೆ ಪೂತನಿಗೊಪ್ಪುವೊಲಾಗೆ ಬೇಗದಿಂ ॥೮೦॥

ವ॥ ಬಂದು ನೀರನಿೞಿಪಿ ಎತ್ತುವರಿಲ್ಲದೆ ಮಾಯದ ಮಗಳೇಂ ತಳ್ವದ[1]ಳ್ನ ಹೋರಿ ಹಸಿದನೆ ಬಾಬಾಯೆಂದು ಪಾಪಿಯ ಕೂಸನೆತ್ತಿ ಕೊಳ್ವಂತೞುವ ಕೂಸನೆತ್ತಿಕೊಂಡು

ಮುನಿಸಿಂ ನಂಜೂಡಿ ತಾಯೂಡಿದ ಮೊಲೆಗಳನಾನಂಜೆನಂತಪ್ಪ ಸೀಳಾಂ ।
ಜನವರ್ಣಂ ಮುನ್ನೆ ಕೆನ್ನೆತ್ತರನೆ ಜಿಗುೞಿ ಪೀರ್ವಂದದಿಂ ಪೀರ್ದು ಹಾಹಾ॥
ಯೆನುತುಂ ಪುಯಲ್ವ ಬಾಯುಂ ಬಿಡದೆ [2]ಬಲ್ಕ ಬಾಲಂಬೊಗಲ್ ಪೂ ।
ತಿನಿಯುಂ ಕಾಳಾಹಿಪೀರ್ವಂತಸುವನಸದಳಂ ಪೀರ್ದು ಕೊಂದಂ ಮುಕುಂದಂ

ವ॥ ಮತ್ತಮೊರ್ವಳ್ ತಿಪ್ರಚಂಡೆ ಚಾಂಡಾಳಪ್ರಕೃತಿಯಪ್ಪ ದೇವತೆ ಕಾಕಾಕೃತಿಯನಪ್ಪುಕೆಯ್ದು

---

ಪಾ. ಭೇ— 1. ನೆ. 2. ಬಿಲ್ಕಾಕ.

ಕಾಕಂ ಪಂಜರದೊಳಗಣ |
ಕೋಕಿಳಮಂ ನೋಡಲೆಂದು ಬರ್ಪಂತಿರೆ ಬಂ ||
ದಾಕೃಷ್ಣನ ಮಣಿದೊಟ್ಟಿಲ |
ನೇಕಾಕಿಯ ಕಣ್ಣನಿರಿವೆನೆಂದೆಱಗಲೊಡಂ ||೭೦||

ಅಡರ್ದು* ಕಮಂಡಲುಜಳಮಂ |
ತುಡುಂಕೆ ಕಂಡೊಳಗನೆಸಡಿ ಕಾಗೆಯ ಮೂಗಂ ||
ಪಿಡಿದುಱದಿಱಿಂಕಿ ಮುಱಿದವೊ |
ಲೆಡೆಗೆಯ್ವಿಡಿದೆತ್ತಿ ಮುಱಿಯೆ ಮೂಗಂ ಬೇಗಂ ||೭೭||

ಪೂಡೆದಗ್ರಾಂಗುಳಿ ಪಕ್ಷದಿಂದುಡಿವಿನಂ ಪಕ್ಷದ್ವಯಂ ಕಾತ್ರಿಕ | ೧೫
ಸ್ಥೊಡೆವನ್ನಂ ನಖಚಂಚುವಿಂದೆಱಗಿ ಮತ್ತಂ ಪೊಯ್ದುಪೆರ್ಗಾಗೆವೊಂ ||
ದೊಡಲಂದೊಂದಡಗಾಗೆ ಮೇಗೆ ಕರೆಯುತ್ತಾಕಾಗೆ ಬೀೞ್ತಿರ್ಪಿನಂ |
ಗಿಡುಗಂ ಕೊಳ್ವವೊಲಬ್ಜಿ ಕೊಂದುದು ಕರಂ ವಾಮೇತರಂ ಕೃಷ್ಣನಾ ||

ವ|| ಅಂತಾ ಕಾಗೆಯುಂತಕನ ಬೋನಕ್ಕೆ [ಯಾಗೆ]ಮತ್ತೆ ಕೆಲವಾನುಂ ದಿವಸದೊಳ್

ಇಱಿದುದು ನೆಲನಂ ಹಸ್ತದ |
ತೆಱದಿಂ ಮುಂದಲೆಯ ನಿಡಿಯ ಜಡೆ ನುಂಗರ್ಪಿಂ ||
ಮಿಱುಗಿದುದು ಬಣ್ಣವಾನೆಯ |
ಮಱಿಯಂತೆವೊಲಂಬೆಗಲಸಿ ನಡೆದಂ ಕೃಷ್ಣಂ ||೭೫||

ಮೊಳೆದಂತೆವೊಲೆಳೆಯ ಮುಗಿ |
ಲೆಳಮುತ್ತುಗಳಂತೆ ಬಳೆವ ಕೃಷ್ಣಂಗೆ ತಳ ||
ತ್ತಳಸಿ ಬೆಳಗಿದುವು ಪವಿಗಳ |
ಮೊಳೆಗಳವೆನೆ ಮಂದಹಾಸಬಿಸವಲ್ಲರಿಯಾ ||೭೬||

ವ|| ಅವಸ್ರಯದೊಳ್ ಮತ್ತೊರ್ವ ದೇವತೆ ಲೋಯಿಸರದ ಮೇಲೆ ಬಂಡಿ ಪರಿದಂತು ಮಾಱಿಪ್ಪೆನೆಂದಂಗಣದೊಳ್ ತೆವಳ್ದಾಡುವ ಮಗನ ಮೇಲೆ ಶಕಟವಾಗಿ ಪರಿತರೆ ಪರಿವ ಬಂಡಿಯೊಳ್ಕಾಲುಗೋವ ಗೋವನೆನಿಸಿ

ಕುಣಿಕಿಲ್ಗಾಲಿ ¹ನೊಗಂ ¹ಪ |
ಲ್ಗಣಿಯುಚ್ಚೆ ನಿಸೊಂದನೊಂದು ತೆಱೆಯದ ತೇಜದಿಂ ||
ಗಣಕೆಯ ಬಂಡಿಯನೊದೆವವೊ |
ಲಣಿಯುರವೊದೆದಂ ಪ್ರತಾಪಿ ಕೃಷ್ಣಕುಮಾರಂ ||೨೭||

ವ|| ಆರಥಮುಂ ಕಂಸನ ಮನೋರಥಮುಂ ಭಗ್ನಮಾಗೆ ಮತ್ತೊರ್ವ ದೇವತೆ ಕಿಶೋರವಾಗಿ ಕೇಶವಂಗೆ ಕೇಗಿರಿ ಕಿವಿಯುಂ ಬಾಯುಮಂ ತೆಱೆದು ಕೊಂಡು

ಬೆದಱದೆ ಬಂದು ಬಾಳಕನ ಕೈಯ್ಯನೆ ಕಾಯ್ದು ಕಡಂಗಿ ಕರ್ಚೆ ಕೊ |
ರ್ವಿದ ಕುಱುಕೊಯ್ಯೆಯೊಲ್ ಮುಸಗಿ ಪೋವವೊಲಾತನುಮೋಱೆ ನೂಂಕಿ ಕು
ತ್ತಿದೊಡದು ನೆತ್ತಿಯಿಂದೊಡೆದು ಮೂಡುವುದುಂ ತೊಳಗಿತ್ತು ಕೆಂದಳಂ |
ಕುದುರೆಗಮತ್ತಮೊಂದು ಕಿವಿ ಮೂಡಿದುದೆಂಬಿನಮಂಬುಜಾಕ್ಷನಾ ||೨೮||

ವ|| ಅಂತಾಗೂಂಟನ ಬಾಯೊಳ್ಗಂಟಮುಂ ಬೆಟ್ಟದಂತಿರ್ದ ಕೈಯ್ಯನುರ್ಚಿ ಕೊಂಡು ಕೊಂಡದ ಕಿಚ್ಚಿನಂತಿರ್ದ ಕೋಪದೊಳಾದುಷ್ಟಾಶ್ವಮನಿಕ್ಕಿಯಶ್ವಮೇಧಮಂ ಮಾಡಿ ತುಱುಪಟ್ಟಿಯ ಪಾಲುಂ ಮೊಸಱುಂ ಬೆಣ್ಣೆಯುಮಂ ಸೂಱೆಗೊಂಡು ಸಹಪಾಂಸುಕ್ರೀಡಿತರಪ್ಪ ಗೋಪಕುಮಾರರ್ಗೆ ದಕ್ಷಿಣೆಗುಡುವಂತೆ ಕೊಟ್ಟು ಪೊರೆಯುತ್ತುಮಿರೆ

ಆಡುವ ಮಕ್ಕಳನೆಱಕೊಂ |
ಡೂಡಿಯುಮೊಳಗಿರ್ದ ಬೆಣ್ಣೆಯಂ ಮತ್ತಮದಂ ||
ಬೇಡಿದಪಂ ಕಾಡಿದಪಂ |
ಬೇಡೆಂದು ಯಶೋದೆ ನಿನ್ನ ಮಗನಂ ಕರೆಯಾ ||೨೯||

ಸಲೆ ಕಾಯ್ದ ಪಾಲ್ ಬರ್ದುಂಕದು |
ನೆಲಹಿನ ಪಾಲುಂ ಬರ್ದುಂಕದೆಲೆ ಕಱವೀಕಂ ||
ದಲ ಪಾಲುಂ ಮುಂ ಬರ್ದುಕವು |
ಮೊಲೆಯೂಡ ಯಶೋದೆ ಕರೆದು ನಿನ್ನಯ ಮಗನಂ ||೩೦||

---

ಪಾ. ಭೇ — 1. ಮೊಗ.

ಕಱೆಯುಲಱಮುಣ್ಮಿದಿರ್ದೊಡೆ ।
ಮಿಱುಂಕಿ ತೊಡೆಯಿಂದೆ ಕಾಲನಾಕಳನಾತಂ ॥
ಕಱೆವವೊಲೆಲ್ಲರ ಬಾಯೊಳ್ ।
ಕಱೆದಪನೆಲೆ ಕರೆ ಯಶೋದೆ ನಿನ್ನಾತ್ಮಜನಂ ॥೮೧॥

ವ॥ ಆರ್ಗೆ ಪುಟ್ಟಿಯಾರ್ಗೆ ಮುದ್ದಾದನೆಂದು ಗೋಪಿಯರಿಕ್ಕುವ ರಕ್ಕ, ರಕ್ಕಸಕಾರಣಕ್ಕಿರಲಾಱದೆ ಯಶೋದೆ ಕರೆದು ಕಡೆವ ಕಂಭದೊಳ್ ಪಿಡಿದು ಕಟ್ಟಿದೊಡಾಕೆಜ್ಜನ ಕಂಭಮನಂಗಜಗಜಮಾಳಣಿಯುಂ ಮುಱಿವಂತೆ ಮುಱಿದು ಪೊಱಮಟ್ಟು ಪೋಪ ಕೃಷ್ಣನಂ ಕಂಡು ಕಡುನುಡಿದು ಜಡಿದು:—

ದಾವಿಯೊಳಡಸಿ ಯಶೋದಾ ।
ದೇವಿಯು ಕಟ್ಟಿರ್ದುದುದರದೊರಲುಡೆಗಱಿತಂ ॥
ದೇವೇೞ್ವನೊ ದಾಮೋದರ ।
ದೇವಂಗುಡೆವಣಿವೊಲಾಯ್ತು ಬಿಣ್ಪಿಂತಾಯ್ತೇ ॥೮೨॥

ವ॥ ಆನೆಯನೆತ್ತುವಂಗಾಡು ಜಿಕ್ಕಾಡೆಂಬಂತೆ ಗೋವರ್ಧನಾಚಲಮನೆತ್ತಿರ್ದಂಗುಲೂಖಲಮೆಂಬುದಾವಲೆಕ್ಕಮೆಂದಱಿವರೆಲ್ಲರುಮೊಂದೆಕೊರಲಿಂ ಪೊಗೞೆ ಪೇರೊರಳನೆೞೆದು ಪರಿವಾಡಿದಂ ಮತ್ತಮೊರ್ಮೆ ಮತ್ತಿಯ ಮರಂಗಳಾಗಿ ಮರುಳ್ದೇವತೆಗಳಾಡುತುಮಿರ್ದ ಕೃಷ್ಣನ ಕರಿಯ ಕುರುಳೆಂದು ನೀಲನುಂ ಕತ್ತುರಿಮಿಱುಂಕುವಂತಿಱುಂಕಲೊಡನೆ:—

ಅಮಿತಬಳಂ ಕಿೞ್ತಿಕ್ಕಿದ ।
ನಮುಕಿಂ ಮಾಂಕರಿಸಿ ಕಂಭಯುಗಮಂ ಪುರುಷೋ ॥
ತ್ತಮನಾಕಂಸನ ಭುಜಯುಗ ।
ಳಮನವಯುವದಿಂದೆ ಕೀೞ್ವುದಂ ಗುಣಿಯಿಪವೋಲ್ ॥೮೩॥

ವ॥ ಮತ್ತಮಾತನದಟುಂ ಪೇೞ್ವೊಡೆ—

ಅಡೆವಂ ಗೋಣ್ಮುಱಿಗೊಂಡು ಬೋಳದಲೆಯುಂ ಮುಂಗೆಯ್ಗಳಂ [ಮೂರಗೊಂ ।
ಡಿಡುವಂ ಕೊಂಕಿಕೊಡಂಕೆಯುಂ ಮುಱಿವನುಳ್ಗುತ್ತಳ್ಳೆಯುಂ ಗಲ್ಲಮುಂ ॥

ಮಿಡಿವಂ ಮಿಂಡರ ಮೀಸೆಯುಂ ಸೆೞೆದು ಮೂಗಿಟ್ಟೇಱುವಂ ಮಕ್ಕಳ ।
ೞತ್ತೊಡೆ ಬಾಯ್ವಾಯನೆ ಪೊಯ್ವನೇಂ ಸಿತಗನೋ ಕಾಳಾಹಿಕೋಳಾಹಳಂ ॥
ಇಡುವಂ ಗುರ್ದುವನುರ್ದುವಂ ಕೆಡಪುವಂ ಮೇಲಿಕ್ಕುವಂ ಕುಕ್ಕುವಂ ।
ಬಡಿವಂ ಬಯ್ದು ಚಿವುಂಟುವಂ ಕಿಸಿಸುವಂ ಪಾಯ್ದೊತ್ತುವಂ ಕುತ್ತುವಂ ॥
ಜಡಿವಂ ಜತ್ತುಕುೞಾಡುವಂ ಬಳಸುವಂ ಬೆನ್ನಟ್ಟುವಂ ಮುಟ್ಟುವಂ ।
ಪಿಡಿವಂ ಮಕ್ಕಳನೇಂ ಕರಂ ವಿಕರಿಯೋ ಕೂಸಾಟದೊಳ್ ಕೇಶವಂ ॥ ೮೫ ॥

ವ॥ ಅಂತಾತುಱುಪಟ್ಟಿಯ ಕಿಱುಮಕ್ಕಳಂ ಮಿಂಡಮಕ್ಕಳುಮನೊಂದೆ ಕೋಲೊಳ್ ತಂದು ಪುಯ್ಯಲಿಡಿಸುವ ಕೃಷ್ಣನಂ ತುಱುಕಾರ್ತಿಯರೆಲ್ಲರೞುತ್ತುಂ ಕರೆಯುತ್ತುಂ ಬಂದು ತಂತಮ್ಮ ಮಕ್ಕಳ ತರೆದ ಮೆಯ್ಯುಮುಂ ಮುರಿದ ಕೆಯ್ಯುಮುಂ ಪರಿದ ಕಿವಿಯುಮುಂ ಒಡೆದ ಮೂಗುಮುಂ ಅಡೆದ ನೆತ್ತಿಯ ಬುಗುಟುಮುಂಡೆಯುಮುಂ ಯಶೋದೆಗೆ ತೋಱಿ ದೂಱೆ ಗೋಪಿಯಿಂತೆಂದಳ್ :—

ಪಗೆಯ್ವಂ ಕೊಂದೊಡಮೇನ
ಗಾಗಂ ಬಸಮಲ್ಲನೆನಗೆ ಕಿಚ್ಚಿಲ್ಲದೆ ತಾ ॥
ನೇಗಂಡುರಿದಪನೞಿಯೆಂ ।
ಪೋಗಿಂ ನೀಂ ಮೆಚ್ಚುಮೆಚ್ಚು ಕೆಯ್ಯಂ ಮುಗಿದಳ್ ॥ ೮೬ ॥

ವ॥ ಎನೆ ಗೋಪಿಯದೂರ್ಱಲೇವೇೞ್ಕುಂದು ದೂಱಿದೆವಲ್ಲಲೆ ತುಱುವತಿಗೆ ನೆರೆಯ ಪೋರದೆ ಬಂದೆವಲ್ಲೆವು, ನೋಡಿನ್ನುನಿನ್ನಮಗನ ಕೇಡನೆಂದು ಪೋಗಿ ಮಕ್ಕಳೋಪಾದಿಯ ಮಗುವೆಂದೇ ಒಗೆದು ಸೆಳೆಯಂ ಕೊಂಡು ಕಿಱುಮುಗಿಲ ಬೆನ್ನಟ್ಟುವ ಕುಡುಮಿಂಚುಗಳಂತೆ ಗೋಪಿಯರೆಲ್ಲಮೆಲ್ಲನುಲಿದು ಮಲೆದು ಬೆನ್ನಟ್ಟೆ ಕೃಷ್ಣನುಂ ಕಿಱುನಗೆನಗುತ್ತುಂ ಕಿಱಿದೆಡೆಯನೋಡಿಯೋಡಲಾಱದಂತೆ ಮಗುಳ್ದು—

ಒೞಿಯಿಂ ಮಕ್ಕಳನಿನ್ನೊಡ
ನುಡಿದೊಡವೆಂದಂತೆಯಾಗ ಕಂಜಾಕ್ಷಂ ಕಾ ॥
ಲ್ವಿಡಿದೆತ್ತಿ ಕೆಡಪಿ ಕಾಲಂ
ಪಿಡಿದೆೞೆದೆೞೆದಳ್ಕಿಸಿ ಬಿಟ್ಟನಾಗೋಪಿಯರಂ ॥ ೮೭ ॥

ವ|| ಮತ್ತಮೊರ್ವೞ್ ದೇವತಾವತಾರಮಪ್ಪ

ತಾಳತರು ಪಣ್ಗಳಂ ಬೇ |
ತಾಳಂ ಚಲ್ಗೊಂಡು ಕಪಿವಪ್ರೊಲ್ಕಡೆದುದು ಗೋ ||
ಪಾಳರ ತಲೆಯೊಡೆವಿನಮಾ |
ತಾಳಂ ಬಳೆಗಳೆದನೊಂದೆ ಪೊಯ್ಲಿಂ ಕೃಷ್ಣಂ ||೮೮||

ವ|| ಇವಂ ಮನೆಯೊಳಿರ್ದೊಡೆಲ್ಲಿಲ್ಲದ ದೋಷಂ ದುರ್ಯಶಮುಮಂ ತಂದಪನೆಂದು ನಂದಗೋಪಂ ಗೋವಳರಂ ಪಸದನಂಗೊಳಿಸಿ ಗೋವಿಂದನಂ ಗೋಕುಳಮಂ ಕಾಯವೇೞ್ದು ಕಾಡನೂಡಿ ಕಾಡೊಡೆಯಂಗೆಱಗಿ ಗೋಪಾಳವೃಂದದೊಡನೆ ವೃಂದಾವನಕ್ಕೆ ಕಳಿಪೆ ;

ಉರಗಾನೀಕಮನೆತ್ತಿ ತರ್ಪನಿದು ಬಲ್ಪೇಸೆಂದು ತನ್ನಂದಸುಂ
ದರಿಯೋವೋವೆನುತೋಡೆ ಕಾಡ ಪುಲಿಯುಂ ಜೆಕ್ಕೆಂದು ತರ್ಪಂ ಮಹಾ ||
ಕರಿಯುಂ ಕೊರ್ವಿದ ದಂಷ್ಟ್ರಿಯೆಂದು ಪಿಡಿತರ್ಪಂ ನೋಡ ನಾಯೆಂದು ಕೇ |
ಸರಿಯುಂ ಪೊಸದೊಳಕ್ಕಿ ತರ್ಪನಿದು ಬಾಲಕ್ರೀಡೆ ಗೋಪಾಳನಾ ||೮೯||

ವ|| ಮತ್ತಮೊಂದು ದಿವಸಂ

ಬಸನಕ್ಕೆತ್ತಿದ ಬಾಲಮೆತ್ತಿದ ರವಂ ಬಳ್ಕಿರ್ದ ಬೆನ್ ಬಿಟ್ಟರ |
ಕ್ಕಸಗಣ್ಬಾಯ್ದೆಱೆದಂತೆ ತೋರ್ಪ ಕಿವಿಗಳ್ಗೋವೃಂದಮಂ ಕೂಡಿ ಬೆ ||
ರ್ಚಿಸೆ ಪದ್ಧಾಳವಿಶಾಳದೀರ್ಘದಶನಂ ವ್ಯಾದಾನವಕ್ತ್ರಂ ಮಳೀ |
ಮಸವರ್ಣಂ ಪರಿತಂದುದೊಂದು ನವದೂರ್ವಾಕರ್ದಭಂ ಗರ್ದಭಂ ||೯೦||

ಪೇಱಿಕ್ಕಿದಂತೆ ಬೆನ್ನೊ |
ಳ್ತ್ರಾಸೆಯ ಪಣ್ ಕಱುತ್ತು ಕರ್ಚಿ ಬಿಟ್ಟುದು ಪೆಱಗ ||
ಣ್ಗೋಪೆ ಪಿತೃಪತಿಗೆ ಪೆಣನಂ |
ಪೇಱುವ ಪೆರ್ಗತ್ತೆಯಂತೆ ಖರಸಂಕುಳಮಂ ||೯೧||

ವ|| ಅಂತು ಪಟ್ಟಗಳಂ ವಾಂಟಿ ಕೆಡಪುತ್ತುಂ ಕಡವಂಗಳಂ ಕರ್ಚಿ ಕೆಡಪುತ್ತುಂ ಬೆಗಡುಗೊಂಡೋಡುವ ಗುಂಡನುರುಳವಾಯ್ದು ಕೆಡಪುತ್ತುಂ ತಾನೆ ತನ್ನ ಬೀರಕ್ಕೆೞ್ಚಱಿದ ಕಱುತ್ತೆಯಂತೆ ಬೆಬ್ಬಸಬೆಸೆದು ಬ್ರಹ್ಮನಂ ಕೂರಿಸಿದ ಕತ್ತೆಯುಂತಾರುಮಂ ಕೈಕೊಳ್ಳದಿದಿರ್ ಬಾಯ್ಗೆ ಬ್ರಹ್ಮಾಂಡಮೆಯ್ದ

ದೆಂಬಂತೆ ಬಾಯುಂ ತೆಱೆದು ಕೇಳ್ದರೆರ್ದೆ ತೆಱಪಿನವೊಳೞ್ ಪೆಟ್ಟಯು ಪೊಟ್ಟೆಯಂ ಕರ್ಜ ಸೆೞೆಯೆ ಬಾಯೊಳೞ್ಲ್ವ ಕರುಳಂ ಕಪ್ಪೆಯ ನೇಣಂ ಕರ್ಜ ಪರಿವ ಕುದುರೆಯಂತೆ ಬೀದಿವರಿದು ಮಾಮಸಕಂ ಮಸಗಿ ತುೞುಪಳ್ಳಿಯೆಲ್ಲಮನೊಕ್ಕಲಿಕ್ಕಿ ಕೊಲ್ವ ಕೞ್ತೆಯ ಕೋಳಾಹಳ[1]ಕ್ಕಂತೆ ಕುಣಿವಂಗೆಱಿಯುಪ್ಪನಾದಂತೆ ಗೋವಳಗಾರ್ವಳಿಗೊಂಡು ಗೋವಳಗೋಲನೆತ್ತಿ ಕೊಂಡೊದಱೆ ಧೀರನದಿರದೆ ಬರ್ಪುದಜ್ಜೆಯ ಬೇೞ್ಪುದವರೆಯಲಿಟ್ಟೆಂಬಂತೆನ್ನ ಬೇೞ್ಪತೞುವಿನಾತನೆಂದು ಕೞ್ತೆ ಮೇಲ್ವಾಯಲೊಡನೆ:—

ಹರಿ ಹರ್ಯಕ್ಷನ ಬಾಯುಂ ।
ತಿರೆ ಕೞ್ತೆಯ ತೆಱೆದ ಬಾಯನೊರಹಾಯ್ತನಗೆಂ ॥
ದೆರಡುಂ ಕೆಯ್ಯಂ ಪಿಡಿದಾ ।
ಸುರವಾಗಿರೆ ಸೀೞ್ದು ಬಿಸುಟನೆರಡುಂ ದೆಸೆಗಂ ॥೯೭॥

ವ॥ ಆಗಳ್ ಕೃಷ್ಣನ ಕೆಯ್ಯ ಕೋಲಿಂದುದಿರ್ದ ಪಲ್ಗಳಾ ಕೞ್ತೆಯ ನೆಗೞ್ತೆಯಂ ಕೞ್ತೆಯೊಳೞ್ತ ಕವಡಿಕೆಯಂ ಬಿತ್ತಿದಂತೆಸೆಯೆ ಮುರಾರಿಯು ವೀರವೃತ್ತಿ ದೆಸೆಗೆ ಬೆಸೆಯೆ ಮೂಗಿನ ಮೇಲೆ ಕೆಯ್ಯನಿಟ್ಟು ಜನಮೆಲ್ಲಂ ಚೋದ್ಯಂಬಡೆ ತಾಯುಂ ತಂದೆಯುಂ ಸಂತೋಷಂಬಡೆ;—

ನಿಯತಾಹಂಕೃತಿಪೂತನಾಪ್ರತಿಭಯಂ ಲೋಲೋತ್ಕಕಾಕಾಂತಕಂ ।
ಲಯಶಂಕಾಶಕಟಾಪಕಾರಿ ಖರತಾಚಕ್ರೀವಜೀವಾಪಹಂ ॥
ಭಯಲೋಭಾರ್ಜುನಭಂಜನಂ ನುತಯಶೋದಾಸಪ್ರಿಯಾತ್ಮೋದ್ಭವಂ ॥
ಜಯಮಂ ತಾಳ್ದಿದುದಾತ್ತಸನ್ನಿಭಗುಣಂ ಶ್ರೀಗಂಧಗೋಪಾಳಕಂ ॥೯೮॥

— ಗದ್ಯ —

ಇದು ಮೃದುಪದಬಂಧಬಂಧುರ ಸರಸ್ವತೀಸೌಭಾಗ್ಯವ್ಯಂಗ್ಯಭಂಗಿನಿದಾನದೀಪವರ್ತಿ
ಚತುರ್ಭಾಷಾಕವಿಚಕ್ರವರ್ತಿ ನೇಮಿಚಂದ್ರ ಕೃತಮುಂ
ಶ್ರೀಮತ್ಪ್ರತಾಪಚಕ್ರವರ್ತಿ ವೀರಬಲ್ಲಾಳದೇವ ಪ್ರಸಾದಾ
ಸಾದಿತ ಮಹಾಪ್ರಧಾನಪದವೀವಿರಾಜಿತ ಸಜ್ಜೆವಳ್ಳ
ಪದ್ಮನಾಭದೇವ ಕಾರಿತಮುಮಪ್ಪ
ನೇಮಿನಾಥ ಪುರಾಣದೊಳ್
ಹರಿಬಾಲಕ್ರೀಡಾವರ್ಣನಂ
ಸಪ್ತಮಾಶ್ವಾಸಂ ಸಮಾಪ್ತಂ

ಪಾ. ಭೇ.—1. ಕ್ಕಂಪೆಕುಣಿವಂಗೆ.

# ಅಷ್ಟಮಾಶ್ವಾಸಂ

ಶ್ರೀಯಂ ಪಡೆದಂ ವಿಬುಧ |
ಗೀರ್ಯಲ್ಪಡೆದಂ ಪ್ರತಾಪಮಂ ಧಾರಿಣಿಯಿಂ ||
ಕಾಯಲ್ಪಡೆದಂ ಪ್ರತಿಭೆಯ |
ನಾಯಮನಱಿಯಲ್ ಯಶೋರ್ಥಿಮೂರ್ತಿ ಮುಕುಂದಂ ||೧||

ವ|| ಆಗಂಡಗೋಪಾಳನ ಗೋಕುಳಕ್ಕೆ ಪುಲ್ಲಂ ನೀರುಮಂ ಸಲಿಸೆ ಬೆರ್ಚೆ ಬೆಸಕೆಯ್ಯಲೆಂದು

ನೀರಂ ನೀರಂಧ್ರಮೇಘಂ ಸುರಿಯೆ ಮೊರೆಯೆ ಭೀಮಾರುತಂ [ಮಾರುತಂ[1]ಕೊ |
ಳ್ಗಾರಂ[1]ಗಾರಂಬೊಲಾಯ್ತೆಂದಗಿಯೆ ಪಥಿಕರುಚ್ಚಾತಕಂ ಚಾತಕಂ ಕಾ ||
ಸಾರಾಸಾರಾರ್ಥಿ ಗೋಳಂಗುಡಿಯೆ ನಲಿವೆನೋ ಜಂಬುವಂ ಜಂಬುವಂ ಸೋ
ಕೀರಂ ಕೀರಂ ಕದುರ್ಗಂಕುತ್ತಿರೆ ಕೆರಳಿಸಿದತ್ತೋವಿ ಕಾರುಂ ವಿಕಾರಂ ||೨||

ಎಳಮಿಂಚಂ ತಳೆಯಿಕ್ಕಿ ಚಾದಗೆಗಳಂ ಬಿಟ್ಟೋಡಿ ಬಳ್ಗಚ್ಚಲಿ |
ಟ್ಟೆಳಸೀಳಾಂಬುದದಿಂ ಬೞಲ್ದ ಗಗನಶ್ರೀ [2]ಧೇನುವಂ[2] ಕೋಮಳಾ ||
ಮಳದೀರ್ಘಾಮೃತಧಾರೆಗಳ್ಸುರಿಯೆ ಭೋರ್ಭೋರೆಂಬಿನಂ ಶಕ್ರಚಾ |
ಪಳತಾದಾಮುಕದಿಂದೆ ಕಟ್ಟೆ ಕಱೆದಂ ಕಾರೆಂಬ ಗೋಪಾಳಕಂ ||೩||

ವ|| ಅಂತುಮಲ್ಲದೆ—

ಕಳಕೇಕಾರುತಿ ಪ್ರೋಲೆ ವೇಣುರುತಿಯಂ ಬೀಸುತ್ತೆ ಮಿಂಚೆಂಬ ಗೋ |
ವಳಗೋಲಂ ಪೊಡೆಸೆಂಡುವೊಯ್ದು ಸಿಡಿಲಂ ಗೀರ್ವಾಣಬಾಣಾಸನ ||
ಚ್ಛಳದಿಂ ಕತ್ತರಿವೀಲಿಯೊಂದು ಪಣೆಕಟ್ಟಂ ಕಟ್ಟಿಕೊಂಡಭ್ರಕಂ |
ಬಳಸಂ ಗೋವನವುಂಕಿ ಬಂದೊದಱಿದಂ ಕಾರೆಂಬ ಗೋಪಾಳಕಂ ||೪||

---

ಪಾ. ಭೇ—1. ತೊಲ್ಗಾರಂ, ಕೊಲ್ಗಾರಂ. ೨. ಧೇನುವಿಂ.

ವ|| ಅಂತು ಬಂದ ಕಾರ್ಗಾಲಮಂ ಕಂಡು ಮನಂಗೊಂಡು ಮತ್ತ ಮಾದೇವತೆಯರ್ ಭೇತಾಳನ ಪೆಣದಂತೆ ಬೆನ್ನ ಕೆಯ್ಯಿಂ ಬಿಡದೆ ಕೊಂದ ಕೊಲೆಯುಂ ತಲೆಪಮನುೞಿಯದುದಕಮೂರ್ವಿರ್ದರದಿಂ ಕಟ್ಟಿಂ ಕೆಡದಂತೆ ತನ್ಮಗುರ್ವಿನಗುರ್ವಣೆಯ ಕಾಕಾಪಿಕಾರದಿಂ ಸತ್ತುಂ ಸಾಯದೊಂದೆಡರೆ ಮಂದು ಪರಿವ ನೀರಂ ¹ಪರಿಯೆ¹ ಪೊಯ್ಯಲುಮುರಿಯನಿೞಿದೇರ್ಪಡಿಸಲುಂ ರಸಮುಂ ಸೋಯಿಸಲುಂ ನಮ್ಮಂ ನೋಯಿಸಲುಂ ಇನ್ನುಮೊರ್ವಂ ಪುಟ್ಟವನುಂಟಕ್ಕುಮೆಯ್ಯದೋರ್ವರೊರ್ವರಂ ಕೆಯ್ಯಂ ಪೊಯ್ದು ಕಹಕಹಾಟ್ಟಹಾಸದಿಂ ಕರುಳ್ ಪರಿಯೆ ನಕ್ಕು—

²ಆದಟಂ² ಮಂಡೆಯಮಾನಾ |
ಱದ ತರುವಲಿ ನಮಗಮರಿಯನಾದನವಂ ಪೆ ||
ರ್ಚಿದೊಡಾಭವನುಂ ಜವನುಂ |
ಕದನದೊಳಾನಲ್ಕೆ ನೆರೆಯರೆಂಬನಿತಕ್ಕುಂ ||೫||

ವ|| ಆದೊಡಮಿನ್ನುಮೊರ್ಮೆ ನಮ್ಮೊಳಪ್ಪುದು ಮಲ್ಲನಂತೆ ಮೆಯ್ವತ್ತಿರೆ ಧನುರ್ಧರನಂತೆ ದೂರದಿನೆಚ್ಚು ನೋೞ್ಪಮೆಂದು ಕೃಷ್ಣಂ ತುಱುಗಾಯಲೆಂದು ಪೊಲಕ್ಕೆ ಪೋದಲ್ಲಿ—

ಪಡೆದದೇವತೆಯರ್ಗೆ |
ಕಡುಮುಳಿಸಿಂದುರಿದು ದಹನಶಿಖಿಗಳ ಪೊಗೆಯುಂ ||
ಪಡೆವಂತೆ ಪತ್ತು ದೆಸೆಗಂ |
ಗುಡಿಗಿೞಿದಂತಾಗೆ ನೀಳಮೇಘಾವಳಿಯುಂ ||೬||

ಕಡಲೊಳ್ ಪಟ್ಟರ್ಣವಂ ಪುಟ್ಟರದಿರೆ ಬನದೊಳ್ ಬಂದ ಸಪ್ತಾರ್ಣವಂ ಮೇ |
ಗೊಡೆವಿರ್ದಂತಾಗೆ ಮಿಂಚೆಂಬುರಿ ಮಿಗೆ ನಭಮಾಶಾಮುಖಶ್ರೇಣಿಯುಂ ಗೋ ||
ೞಿಡುವಂತೋರಂದದಿಂದಂ ಮೊೞಗೆಮುಸುಱಿ ಮೇಘೌಘಮುಬ್ಬಿಕ್ಕಿನಂ ಬ
ಲ್ಪಿಡಿಲಿಂದಿಟ್ಟಾಲಿಕಲ್ಲಿಂದೆೞಗಿ ಕಱೆದುದಾಗೋಕುಲಂ ತೇಂಕುವನ್ನಂ ||೭||

ಪಾ. ಭೇ—1. ಪಳಿಯೆ. 2. ಆದಟಂ.

॥ ತ್ರಿವದಿ(?) ॥

ಮೊೞಗಿ ಮಿಂಚೆ ಮುಂಚೆ ಕೊಳ್ವ । ಮೞೆಗಳಂಬುರಾಶಿಯೊಳ್ ।
ಕಱೆಯೆ ನೀರನುಂಡು ಮೇಘ । ಮೊೞಱಿ ಕಾಱುವಂತುಟಾಯ್ತು ॥
ಪೊಡೆವ ಸಿಡಿಲ್ಗಳನೆಳೆಯೊಳ್ ।
ಕೆಡೆದೇೞ್ತಂಟಣುಕು ನೆಗೆದು ನುರ್ಗಪ್ಪಿನೆಗಂ ॥
ಪೊಡೆದಂ ಗೋವೞಗೋಲಿಂ ।
ಪೊಡೆಸೆಂಡಾಡುವವೊಲೇಂ ಬಲಸ್ಥನೊ ಕೃಷ್ಣಂ ॥೯॥
ಕರಗದ ಮುಗಿಲಂ ಪರೆಯುದ ।
ಸುರಧನುವಂ ಮಿಂಚೆ ಕಿಡದ ಮಿಂಚಂ ಪೊಡೆದೋ ॥
ಸರಿಸದ ಸಿಡಿಲಂ ಸಮೆಯುದ ।
ಸರಿವೞೆಯುಂ ಕಂಡು ಬೆಗಡುಗೊಂಡರ್ ಗೋವರ್ ॥೧೦॥

ವ॥ 'ಅಗಳಂಜೆಯುಂ'ಜಲಿಯೆಂದು ಬೆಗಡುಗೊಂಡ ಗೋವಳಿಗರ ನೊಡಗೊಂಡು ದೊಮ್ಮಳಿಸಿ ಮಮ್ಮೞಗೊಳ್ವ ಗೋವುಗಳನಟ್ಟಿಕೊಂಡು ಕಿಱಿದಂತರದೊಳಿರ್ದ ಗೋವರ್ಧನಗಿರಿಯ ಮಱೆಗೆ ಪೋಗಿ ಅದೊಂದೆ ಸೞಿಯಪ್ಪುದಱಿಂ ಪಶುಶಿಶುಪ್ರವೇಶಕ್ಕಂ ತಕ್ಕ ಮಱೆಯುಂ ಕಾಣದೆ—

ಪರಲಂ ಬಾರ್ತೆಗೆ ಮಿಂಟುವಂತೆ ಚರಣಾಂಗುಷ್ಠಾಗ್ರದಿಂ ಮೀಂ
[ಟಿ ಝು ।
ಲ್ಲರಿವೊಲ್ ಝುಲ್ಲನೆ ಸೂಸಿ ನಿರ್ಝರಜಲಂ ಬಿಟ್ತರ್ಪಿನಂ ಕಾಪಿನಂ ॥
ತಿರೆ ಕೊಂಡೆತ್ತಿದ ಕೆಯ್ ಮುರಾರಿ ಕೊಡೆಯುಂ ಕ್ರೀಡಾರಸಕ್ಕೆತ್ತುವಂ ।
ತಿರೆ ಕಿೞ್ತೆತ್ತಿದನೊಂದೆ ಕೆಯ್ಯೊಳ್ ಮಹಾಗೋವರ್ಧನಾದ್ರೀಂದ್ರಮಂ ॥

ಪೋಲೆ ಬಲಗೆಯ್ಯ ಗೋವಳ ।
ಗೋಲೊಡ್ಡಿಸುವವರ್ದ್ದಮಾಗನವಯುವದಿಂ ಗೋ ।
ಪಾಲನೆಡಗೆಯ್ಯೊಳೆತ್ತಿದ ।
ಶೈಲಂ ಸೆಂಡಿನವೊಲಿರ್ದುದೇನಚ್ಚರಿಯೋ ॥೧೨॥

---

ಪಾ. ಭೇ.—1. ಅಗಳಂಬಿಜಯುಂ. 2. ವರ್ದ

ಹರಿ ಗಿರಿಯು ಪರಲ್ಮಿನುಗು ।
ತ್ತಿರೆ ತಲೆಯಿಂ ತೆಗೆದು ಕಮಠನಂ ಕಮಠಂ ಪೊ ॥
ತ್ತುರಗನನಾತನ ನಳಿತೋಳ್ ।
ಳುರಗಂ ಪೋಲ್ತೞೆಯುನದ್ರಿ ಪೋಲ್ತಿರೆ ಪೋಲ್ತಂ ॥೧೩॥
ಕರಿಕಳಭಪತಿ ಬಯಲ್ದು ।
ವರೆಯುಂ ಕಿೞ್ತೆತ್ತುವಂತೆ ಕಿೞ್ತೆತ್ತಿದನಾ ॥
ಹರಿತರುಣಂ ಗೋವರ್ಧನ ।
ಗಿರಿಯುಂ ಗೈರಿಕರಜೋವಿರಾಜಿತಧೈರ್ಯಂ ॥೧೪॥
ಶೈಳಮನೆತ್ತುವುದುಂ ಗೋ ।
ಪಾಳಂ ಫಣಮಣಿಗಳಸೆಯೆ ಮಣ್ಮಣಿಸುವ ಪಾ ॥
ತಾಳಾಹಿಪತತಿ ಪಾವಿನ ।
ಪೇಳಿಗೆಯುಂ ತೆಱೆದ ತೆಱದಿನೇಂ ತೋಱಿದುವೋ ॥೧೫॥
ಕೆಂಡದ ಮೞೆಗಳ್ತಂಡದೆ ।
ಕೊಂಡಪುವೆನೆ ಪುಟ್ಟೆ ಪಾಱೆ ಕಿಡಿಗಳ್ ಕೃಷ್ಣಂ ॥
ಕೊಂಡೆತ್ತಿದಗದ ಮೇಗಾ ।
ಚಂಡಿಕೆಯುಮುರ್ಗಳಿದು ಕಲ್ಲ ಮೞೆಯುಂ ಕಱೆದರ್ ॥೧೬॥

ವ॥ ಅಂತೆಣ್ಬರ್ ದೇವತೆಯರೇೞು ದಿವಸಮಾವರ್ತನಪರಿವರ್ತನಂ ಬಂದು ನಿರ್ವರ್ತಿಸಿದ ಸಂವರ್ತನಸಮಯಪರಿವರ್ತಿತಪುಷ್ಕಳಾವರ್ತಂಗಳಂತೆ ಕಗ್ಗನೆ ಕಸಿತು ನೆಗೆದ ನಿಜಜಳಧರಂಗಳ್ ನೀಳಮಹೀಧರಂಗಳ ಏಪ್ರಳ ಪಾಷಾಣಜಾಲಜರ್ಝರಂ ಕಱೆವಂತೆ ಕಱೆವ ಕಲ್ಲ ಮೞೆಗಳಂ ಪೆರ್ಮೞೆಗಳಂ ಗೋವರ್ಧನಂ ಗೋವರ್ಧನಗಿರಿಯನೆತ್ತುವಂತೆತ್ತಿ ಗೋಕುಳಮಂ ಕಾದುದಂ ಕಂಡು ಗೋವರುಂ ಸೀವರುಂ ಜಕ್ಕರುಂ ಚಕ್ಕುಳುಂ ಮಕ್ಕಳುಂ ಮೞೆಗಳುಂ ಬೆಕ್ಕಸಂಬಟ್ಟವಂ ದೇವಂ ದಾನವನುಮಲ್ಲೆಂದು ಪೊಗೞ್ದು ಪುರುಷೋತ್ತಮನನೆವೆಯಿಕ್ಕದೆ ನೋಡಿ ಪರಮಾನಂದಾಮೃತಮನೊಂದೆ ಮೆಯ್ಯೊಳ್ ಪೀರ್ದ ನಂದನುಮಂ ಯಶೋದೆಯುಮಂ ದೇವನುಂ

ಪಾ. ಭೇ—1. ಪೊತ್ತಂ.

ದೇವಿಯುಮೆಂದು ಪೂಜಿಸಿ ಪೊಡೆವಟ್ಟು ಪೋಗೆ ನಾಡುಂ ಬೀಡುಂ ಜಾತ್ರೆ ವೋಗೆ ಕೇಳ್ದು ಕಂಸನಾಶಂಕೆಗೊಂಡು ಎನಗೆ ಬಂದ ಮಾರಿಯಾಗದೆ ಮಾಣದೆಂದು ಮನದೊಳ್ ನೆಮಿಸುತ್ತುಮಿರ್ದನ್ನೆಗಮಾ ದೇವತೆಗಳ್ ಪೋಱಿದ್ದೀಗುಲದ ದೇವತೆಗಳಂತೆ ಬಿನ್ನನಾಗಿರೆ ಬನ್ನಂಬೆತ್ತು ಬಂದು ನಿಂದಾತಗೆ ಎಮ್ಮ ಪವಣಲ್ಲೆಂದು ಪೋಪುದುಂ ಪಲ್ಲ ಪ್ರೋದ ಪಾವಿನಂತಾಗಿ ತಲೆಯುಂ ತೂಗಿ:-

[1]ಮೊಲೆಯೊಳ್ ಪಗೊಡಲಿಗಳುಂ |
ಕೊಳಲಾರದೆ ಮುಕ್ಕುವೋದುವೆಂದೊಡೆ ಮುಂದಿಂ ||
ಬಳೆದು ಮರನಾದ ಕಾಲಂ |
ಕೊಳಲುಂ ಕಡಿಯಲ್ಕಮಾಪ್ಪುದಾವುದುಮುಂಟೇ ||೧೩||

ವ|| ತನಗಿಷ್ಟನಪ್ಪರಿಷ್ಟನೆಂಬ ದಾನವನ ನಡುವಣಕ್ಕರಮಿಲ್ಲದ ದಾನವನಂ ಪ್ರತ್ಯನೀಕದವನಕ್ಕೆಂದು ಒರಿಸಿ, " ಯಾವದಸ್ತಿ ಪ್ರತೀಕಾರಸ್ತಾವತ್ಕುರ್ಯಾತ್ ಪ್ರತಿಕ್ರಿಯಾಂ " ಎಂದೋದಿ ಪಿರಿಯಾಪಿಯುಮಂ ವ್ಯಾಧಿಯುಮಂ ಬಳೆಯದ ಮುನ್ನಮೆ [2]ಕೀಳೆಂದು[3] ಕಡೆಗಣಿಸದೆ ಕಡಿಸುವುದು ಕಜ್ಜಮೆಂದು ಕೃಷ್ಣನ ಮೇಲೆ ಪೇಱಲೆಂದದರ್ನನ್ನೆಗಂ ಗೋಕುಲದೊಳ್

ಅಡೆಯುಂ ಕೋದೆತ್ತುತುಂ ಮಾರ್ದನಿಗೆ ಪೊಸಗುತುಂ ದರ್ಪದಿಂ ಛಾಯೆ
[ಯೊಳ್ [3]ಕೊಂ
ಡಾಡುತುಂ ಪೋರ್ದಲ್ಲಿ ಪುಗಿಲ್ದೊತ್ತಿಗೆ ನೋಣಂ ಶೀರ್ಣಶೃಂಗಾಗ್ರದಿಂ
[[4]ಮಾ ||
ರ್ದೊತ್ತಿಯುತ್ತುಂ ಪಾಯ್ದು ಪಿಂಡಂ ಕಲಕಿ ಕೆಲೆಯುತುಂ ಬೆರ್ಚು ಬಲ್ಲಾ
[ಳ್ಗಳ್ ಬಂ |
ಗುಡೆ ಗಂಟಂ ಸೂಸುತುಂ ಬಂದುದು ಮದವಿದಳತ್ತಿಂಗಳಾಕ್ಷಂ
[ಮಹೋಕ್ಷಂ ||೧೪||

ಅರಣಿಗೊಂಡು ಮುರಾರಿಯು
ನೀರದಸನ್ನಿಭನ ವಿಷಮತರಪೀವರಸಾ

ಪಾ. ಭೇ— 1. ಪೋಳ್. 2. ಕೀಳೆಂದು. 3. ಕೊಂಡಾಡುತುಂ.
4. ಪೂಡೊಡ.

ಸಾರಕ್ಕೆದರಂ ನಡೆದತಿ
ವಾರಣವೃಷಮಿೞಿವ ಕೋಡನೇಂ ತೋಱಿದುದೋ ॥೧೯॥

ವ॥ ತೋಱಲೊಡನೆ,

ದಿಟ್ಟಿ ಪೊಱಪಾಯೆ ಗುಱುಗುಱು ।
ಗುಟ್ಟಿ ವೃಷಂ ಮಡಿದು ಕೆಡೆಯೆ ಗೋೞ್ಮುರಿಗೊಂಡಂ ॥
ತೊಟ್ಟಜೆಯಿಂದವೆ ಸುಟ್ಟಿಪ
ಬೊಟ್ಟಿಂದವೆ ಮೂಗನೂಱಿ ಬಿಟ್ಟಂ ಕೃಷ್ಣಂ ॥೨೦॥

ವ॥ ಅಂತು ಶಾಕ್ವರವರನಾಗಿ ಕೆಕ್ಕಳಿಸಿ ಕಳದಟ್ಟಿಕೊಂಡುಬಂದ ಕಂಸನಟ್ಟಿದರಿಷ್ಟನಂ ಅಧೀಸರಿಷ್ಟನಂ ಕೊಂದಂತೆ ಕೊಲ್ಲದೆ ಪಶುವೆಂದು ಬೇಸಿ ಪಶುಪಾಲನಪ್ಪ ಕಾರಣದಿಂ ಕರುಣಿಸಿ ಕಾದು ಸೋರ್ದುದ ಕಳೆದನದೆಲ್ಲಮಂ ಕೇಳ್ದು ಮೂಱುಂ ಲೋಕಮನಾಳ್ದಸಿತು ಸಂತೋಷಂಬಟ್ಟು ನೋಡಲೆಂದಟ್ಟಿವಟ್ಟು ಗೋಮುಖಿಯೆಂಬ ನೋಂಪಿಯ ನೆವದಿಂ ದೇವಕಿಯುಂ ವಸುದೇವನುಂ ಬಲದೇವನುಂ ವಾಸುದೇವನುಮಿರ್ದ ತುಱುಪಟ್ಟಿಗೆ ಪರಿದಪ್ಪ ವಿಭವಂಬೆರಸು ಬಂದು ಸೌಖ್ಯದ ಸೀಮೆಗಾಣ್ಬಂತೆ ಕೃಷ್ಣನಂ ಕಂಡು ತೆಗೆದು ತಕ್ಕೈಸಿಕೊಂಡು:

ಕಡುದೊರೆದ ಮೊಲೆಯನಂಬಿರ ।
ಪಡಿತಂದುವು ಪಾಲ ಧಾರೆ ಪಲಕಾಲಮಗ ॥
ಲ್ಕೊಡವೆಯನಮೃತಕಳಶಿಗ
ಳೊಡರಿಸಿ ಶಶಿಕಾಂತಮೊಸರ್ವುದೊಂದಚ್ಚರಿಯೇ ॥೨೧॥

ವ॥ ದೇವಕಿ ¹ಕಡುಗಂದಿ¹ಯಪ್ಪುದಱಿಂ ತೊರೆದೆಚ್ಚು ಪಾಯ್ವ ಮೊಲೆವಾಲಿಂ ಮಗನಂ ಮಜ್ಜನಂಬುಗಿಸಿ ಮುಗುಳ್ನಗೆಯುಂ ಮುತ್ತುಮಂ ಬೆರಸೆ ಸೇಸೆಯನಿಕ್ಕಿ ಯಕ್ಷಕರ್ದಮದೊಳ್ಪೂಸಿಕ್ಕಿ ಕಣ್ಣೆಂಜಲಕ್ಕುಮೆಂದು ಸೊಡರಕ್ಕೆ ನೀಡುವಂತೆ ಗಾಳಿಸೋಂಕ²ದೆ² ಸೊಡರಂತಿರ್ದ ಪೊನ್ನ ಸಿಪ್ಪಿನ ಕತ್ತುರಿಯಂ ಕೊಂಡು ಬೊಟ್ಟಸಿಟ್ಟು ಬೆಳಗೆ ಬಿಣ್ಪಿದುವುಂ ಮೆಯ್ಗೆ ನೊಣ್ಪದುವುಮಪ್ಪ ದೇವಾಂಗಮನುಡಿಸಿ ಮಾಣಿಕದೊಡಿಗೆಯುಂ ತೊಡಿಸಿಯುಮ್ಮ

ಪಾ. ಶೋ. - 1. ಕಡುಗಂದಿ 2. [illegible] 3. ದೆ.

ತಾನ್ನುಮನಾಡಿ ತನಯನ ಪಂತಿಯೊಳ್ ಗೋಪಕುಮಾರರ್ಗೆಯುಡಲುಂ ತುಡಲುಮುಣಲುಮಿತ್ತು ಯಶೋದೆ ಮೊದಲಾದ ಗೋಪಿಯರ್ಗೆಲ್ಲಂ ಪೊನ್ನ ರನ್ನದ ಬಾಯಿನಂಗಳಂ ಕೊಟ್ಟು ನೋಂಪಿಯ ನೋಂಪ ವಿಧಾನಮಿಂತುಟೆಂದು ತನ್ನ ಮಗನಿಗಾರ ಮಗನಿತಂ ಪ್ರೋಂಗವಾದಿತ್ಯಂಗಂ ದೇವಂಗಂ ದೇವಿಗಂ ಪ್ರುಷ್ಟಿಯಂತಿರ್ದಪನೆಂದು ತೊಡೆಯನೇಱಿಸಿಕೊಂಡು ನೋಡುವಾಗಳ್ :—

ಉಡುಗಣದ ನಡುವೆ ಮೃಗಧರ
ನೆಡೆಗೊಂಡಿರ್ಪಂತೆ ಕಮಳನಯನಂ ನಲೆ ತ ॥
ನ್ನೊಡನಾಡುವ ಗೋವರ್ಕಳ ।
ನಡುವೆ ಕರಂ ತನ್ನ ಬೆಳಗೆ ಬೆಳಗಾಗಿರ್ದಂ ೨೩ ॥

ವ ॥ ಅನ್ನೆಗಮತ್ತ ನಂದಗೋಪಂ ಗೋಪವೃದ್ಧಿಯರ್ವೆರಸು ವಸುದೇವಬಲದೇವರನೊಡಗೊಂಡು ಪೋಗಿ ಪಂಕಜಾಕ್ಷನುಮನೌಂಕಿಂಗೊಂಕೆಯುಂ ನುಲಿವ ಕಾಗೆಯುಂ ಕನ್ನೆತ್ತರನುಂಡ ನೆಲನೆಲ್ಲಂ ಕೆಮ್ಮಣ್ಣ ನೆಲನಾಗಿ ಪಾಸಿಸಿದೊಡೆ ನೆತ್ತರ್ನಾಱುವಾಗಿ ಪೇಸಂ ಪಡೆವುರ್ವಿಯುಮಂ, ದೇವಕೀಪುತ್ರಂ ಬಿರ್ದ ಪೂಸಿಯ ಸತ್ತ ನೆತ್ತರ ಪಲ್ಗಳಳಂ ಜಾದುಕಲ್ಲ ಕಣಿಯುಂದಮಂ ಕಱಿದು ಮುಟ್ಟ ಬಾಣತಿಯ ಮೊಲೆವಾಲ್ ನಂಜಪ್ಪ ವಿಷಮೃತ್ತಿಕೆಯೆಂಬಿವಂ ತಗುಳ್ದಗುಳ್ದೊಡೆ ಕಾಗೆಗಳ್ ಪೊಱಮಟ್ಟು ಪಾಱುವ ಕಾಕಗರ್ಭಯೆಂಬ ನಾಮಮನಾಳ್ದ ಭೂಮಿಭಾಗಮುಮಂ, ಶಕಟಕಠಾರನ ಕಾಲ ಕೊೞ್ಗಿಂ ನುಚ್ಚುನೂಱಾಗಿ ಪಾಱ್ ಕೆಡೆದ ಕಠಿನಶಕಟದಿಶಾದಂಡಹತಿಯಿಂ ಪೃಥ್ವೀತಳಂ ಪಾತಾಳಕ್ಕೆ ತೂತುವೋಗೆ ಬಾಗಿ ನೋಡಿದರ್ಗೆ ಫಾಯಾಭಗಪತಿಯಂತೆ ಶಕಟಬಟ್ಟೆಯೆ ತೋಯೆ ತೋಱುವ ಶಕಟದ್ವಾರಮೆಂಬ ಬಿಲದ್ವಾರಮುಮಂ, ಯಮಳಾರ್ಜುನಭಂಜನಂ ಕಾಕೇಭಕುಂಜಂಗಳಂ ಕಿೞ್ತೀಡಾಡೆ ಕೂಪದನಿತು ಕುೞಿಯಾಗೆ ನೆಲದನಿತು ಮಣ್ಣ ನಡಕಿ ಪೊಯ್ದೊಡನಾಶಾಗರ್ತದಂತೆ ಪೂಱದರ್ಜುನಗರ್ತವೆಂಬ ನೆಗೞ್ತೆವಡೆದ ಗರ್ತಮುಮಂ ಮುಂಜಕೇಶಿ ಕೇಶಿಕಿಶೋರನ ಬಾಯುಂ ಸೀೞ್ಕೆ ಸುರಿದ ರುಧಿರ

ಪಾ. ಭೇ.—1. ಪೆ.

ದಿಂ ಧರಣೀರೇಣು ಸೆಂದುರಂಬಿರ್ದುದು ಪುಸಿಯೆಂದು ಪುಟ್ಟಿದ ಮೊಗಂಗಳ್ಮಲಿನಮೊಗದಂತೆ ಕುದುರೆಮೊಗಮಾಗೆ ತುರಗಮುಖಿಯೆಂಬಾಖ್ಯಾನಮನಾಂತ ಭೂತಳಮುಮಂ, ಮುರಾರಿ ಮುಂ ಖರನಂ ಸನ್ನನೆ ಸೀಳ್ದಾಜದ ಮುನಿಸಿಂದೊಗೆದಾಜಿ ಪರಪಿ ಧಾತುಸಿಂದೂರದಂತೆಸ್ರ ಕಜ್ಜಳಮೊಳಕಿತು ಜುಳಿಯುತ್ತುಮಿರ್ಪ ಧಾತ್ರಿಯಪ್ಪುದುಂ ಕಟ್ಟಿಗರೆವ ಕಟ್ಟಿಗಲ್ಲೆಂಬಂಕದ ಕಲ್ಲುಮಂ, ನಗಧರಂ ಕಿಟ್ಟಿಕ್ಕೆ ಮುಸ್ಕಿರ್ದವಲ್ಲದೊರ್ಗುಡಿಸಿ ಕಡೆದು ಗೋವರ್ಧನಮೆಂಬಭಿಧಾನಮುಂ ತಳೆದ ಗಿರಿಯುಮಂ ತೋರ್ಪುತ್ತುಂ ಬಪ್ಪುದುಮವರ ಪೇಳ್ಪೇಳ್ಗೆ ಗೋಪಿಜನಪರಿವೃತೆಯಾಗಿ.—

ಕಡುಪಿಂದಾಕಾನನಂ ಕುಪ್ಪಳಿಸಿದಡೆಯಿದಾಪೂತಿನೀರಕ್ತಮಂ ಪೀ |
ರ್ದೊಡೆಯಾತೇರಯ್ತೆ ತೇರಂ ಪಂಪಿದೆಡೆಯಿದಾಮತ್ತಿಯಂ ಲೀಲೆಯಿಂ ಕೀ ||
ಳ್ತೊಡೆಯಾತಾಳಂ ಕುಮಾರಂ ಕೆಡಪಿದೆಡೆಯಿದಾಗರ್ದಭಾಶ್ವಂಗಳಂ ಸೀ |
ಳ್ದೊಡೆಯೆಂದಾದೇವಕೀದೇವಿಗಮುಸಿತೆಡೆಯಂ ತೋರ್ಪುದಳ್ಗೋಪಿಯಾಗಳ್ ||

ನೀಂ ಬೆಸಗೊಳ್ವುದದೇನಾ
ಣಂಬಿಯುನವಯುವಡ ಕೇಳ್ವುತೆಡಿಂ ಕೇಳ್ದೊಡೆ
ಯುಂಬುಜಲೋಚನನೇಱುದಿ
ನಂಬರಮೆತ್ತಿರ್ದ ಗಿರಿಯಿದಂಬುಜವದನೇ ||೨೪||

ವ|| ತೋಱಿ ತನ್ನ ಸುತನ ಶಕ್ತಿಗಂ ಸಾಹಸಕ್ಕಂ ವಿಸ್ಮಯಂಬಟ್ಟು ಮನದೊಳ್ಕಂಸಂ ಮುನಿದಪನೆಂದೊಡೆ ಮುನಿಯುಬೇಡಾ ಎಂದುಪ್ಪಂಸಿವಳಿಸಿ ತೂಪಿಱಿದು ಮಗನಂ ಬಿಟ್ಟು ಬರಲಾಱದ ದೇವಕಿಯುನಂತಾನು ಮೋಱಿದುಕೊಂಡು—

ನಂದನವಿಕಸಿತಮುಖಮುಕು |
ರಂದಮನುಗುಱಿಸೆಯುಮಗಿವ ದೃಗ್ವೃಂದಮನಾ ||
ನಂದದೊಳಾನಕದುಂದುಭಿ |
ಮಂದುಭಿಯಂ ಪೋಯಿಸುತಂದು ಪೋೞಲಂ ಪೊಕ್ಕಂ ||೨೫||

ವ|| ಅಪ್ರಸ್ತಾವದೊಳಾಪೋೞಲ್ಗೆ ಕಾರಣಭೂತಮಪ್ಪ ಚೈತ್ಯಾಲಯದ ಮುಂದಣ ದೇವತಾಯತನಮಪ್ಪ ಬಿಲದ್ವಾರದೊಳ್—.

ಸುಚರರುಚಿಗಳ್ ಜಯಶ್ರೀ |
ಸಚಿವಂಗಳ್ ಹರಿಯುದೊಂದು ಪುಣ್ಯೋದಯದಿಂ ||
ಶುಚಿನಾಗಶಯ್ಯೆಯುಂ ಶಾ |
ರ್ಙ್ಗಚಾಪಮುಂ ಪಾಂಚಜನ್ಯಮುಂ ಪುಟ್ಟುವುದುಂ || ೨೬ ||

ಸುರದುಂದುಭಿರವಮೆಸೆದುದು |
ಸುರತರುವಿಂ ಸುರಿದುದಲರ ಸರಿ ಸೂಸಿದುದಾ ||
ಸುರಮುಖಸರಸಿಜದಿನಹೋ
ಪುರುಷೋತ್ತಮಪುಣ್ಯಮೆಂಬ ನಾದಾವೇದಂ || ೨೭ ||

ಭೂಪಿವರದಸ್ಸೊಗೆತಂದಾ |
ಪಾವಸೆದುದು ಸಪ್ತಫಣಮಣಿಪ್ರಭೆಯಿಂ ಭೂ ||
ದೇವಿ ಫಣಿರಾಜಸಂಭೋ |
ಗಾವಸ್ಥಿತೆ ಬೆಸಲೆಯಾದ ಪಾವಂಜನೆಗಂ || ೨೮ ||

ಪಸರಿಸಿದಮೂರ್ಪಿದ್ಯು
ದ್ರಸಿತಮಸದು ತನಗೆ ತಾನೆ ಶಾರ್ಙ್ಗಂ ಸಿಂಗಂ |
ಮಸಕದಿನಯ್ವಾಯೆಂ ಗ
ರ್ಜಿಸುವವೊಲಯ್ವಾಯು ಶಂಖಮೆಂ ಗರ್ಜಿಸಿತೋ || ೨೯ ||

|| ಭುಜಂಗಪ್ರಯಾತವೃತ್ತಂ ||

ಅವಂ ಕಂಡು ಕಂಸಂ ಭಯಂಗೊಂಡು ಪ್ರೋತಂ |
ದವಂ ಮೂಲಚೈತ್ಯಾಲಯಕ್ಕಲ್ಲ ಪಾದಾ ||
ರವಿಂದಂಗಳೊಳ್ಮೌಳ್ಗಿ ಯೋಗಿಶ್ವರನ್ನಿರ್ಗಂ |
ದವಾದೊಂದು ವೃತ್ತಾಂತಮಂ ಪೇಳ್ವಿಮೆಂದಂ || ೩೦ ||

ವ|| ಅವರಿಂತೆಂದರ್-ಇವು ಮೂರುಂ ಮಹಾರತ್ನಂಗಳ್ ಪರಮ ಪುರುಷಪುಣ್ಯಪ್ರೇರಣೆಯಿಂ ಪುಟ್ಟಿದುವಲ್ಲದುತ್ಪಾತಂಗಳಲ್ಲಂ. ಆವನಾನುಮೊರ್ವ ಮಹಾಭಾಗನೀನಾಗಶಯ್ಯೆಯನೇರುವನೀಶಾರ್ಙ್ಗಧರ್ಮವನೇರಿಸುವನೀಪಾಂಚಜನ್ಯಮಂ ಪೂರೈಸುವನಾತನರ್ಧಚಕ್ರವರ್ತಿಯಾಗಿ ಪೃಥ್ವೀರಾಜ್ಯಂಗೆಯ್ಗುಮೆನೆ ಕಂಸನಿದನೀಗಳೆ ನೋಡಲ್ವೇಳ್ಕುಮೆಂದಾನಾಗಶಯ್ಯೆ

ಯಾನೀಱಿದಂಗೆ ಪಾವಿನ ಪಾಸೆ ಪಸೆಯಾಗಲರಸಂ ತನ್ನ ಮಗಳನಿತ್ತಪ ನೆಂದು ಸಾಱಿಮೆಸೆ ಮಹಾಪ್ರಸಾದಮೆಂದು ಪೆರ್ಗಡೆಗಳ್ ಪೋಗಿ ಗೋಸ ಣೆಯುಂ ಮಾಡೆ:

ಪಾವೆಂದೊಡೆ ಬಡೆ ನಡುಗುವ್ರ।
ದೇವಿಯೊ ಪಸೆಯಲ್ಲಿ ಪಾವು ಕೊಳಲ್ಕ್ಯಗೆಯನೋ ॥
ವೋಸ್ರೊ ಪುಸಿಮುಮವೆ ನೊಡಲೊಳ್
ಸಾವುದಿವಂ ಸತ್ತು ಮದುವೆಯಪ್ಪರುವೊಳರೆ ॥ ೩೧ ॥

ವ॥ ನಿಮ್ಮರಸನ ಕನ್ಯೆ ವಿಷಕನ್ನಿಕೆಯಾವಾಕೆಗಂಜುವೆವಿಲ್ಲಿ ಸೂಲ ಮನೇಱಿ ಪಾಲ್ಗುಡುವರಿಲ್ಲೆಂದು ಬೀರರುಂ ಶೂರರುಮಪ್ಪ ರಾಜಪುತ್ರರ್ ಕಿವಿಯುಂ ಮುಚ್ಚಿಕೊಂಡು ಪೋದರಾಗೋಸಣೆಯಂ ಪೋಪದೊಳರ್ದ ಕೃಷ್ಣಂ ಕೇಳ್ದು—

ಪಸಿಂ ಪಾಸುರಗನೆ ಬಿ।
ಲ್ಲಾನದು ಶೃಂಗಾಹಮೆ ಶಂಬಮೆಯ್ವಾಯದೆ ಪೋ ॥
ಗಾನೇಱುವೆನಾನೆತ್ತುವೆ।
ನಾನೊತ್ತುವೆನೆಂದು ಪಿಡಿಸಿದಂ ಡಂಗುರಮಂ ॥ ೩೨ ॥

ವ॥ ಪಿಡಿಸಿ ಮನೆಗೆ ಪೋಗಿ ಗದೆ ಗಱಿವಱಿಯ ಪಾವಿನಂತೆ ಗೋಸಣೆ ಯ ಬಱಿಯನರಮನೆಗೆ ಪೋಪುದುಂ ಕಂಸಂ ಕಂಡಿದೆನ್ನ ಪಗೆಯುಂ ಬಗೆ ಯುಂ ಸಾಧ್ಯಮಾದುದು ನೋಂತರ ಪಗೆಯನೆಱಿದಂತೆ ಮಾಱಿಪ್ಪೆನೆಂದು ಚೈತ್ಯಾಲಯದ ಮುಂದೆ ಮಹಾಸ್ಥಾನಮಂ ಮಾಡಿ ವಸುದೇವಬಲದೇವ ಮಂಡಳಿಕಮಕುಟಬದ್ಧಸಾಮಂತಮಂತ್ರಿಸಮೇತನಾಗಿ ಕುಳ್ಳಿರ್ದು ಮಂ ತ್ರವಾದಿಗಳನವನಾಹ್ವಾನಂಮಾಡಲೊಡನೆ:—

ಮೊದಲೊಳ್ಕಾಳಾಹಿಯುಂ ಕಾಱುವಪೊಲೊಗೆಯೆ ಧೂಮಾಳಿ ಪೂತ್ಕಾ [ರದಿಂದಂ।
ತಿವಿಯುಂ ಕೊಂಡೊತ್ತಿದಂತುಚ್ಚಳಿಸೆ ಬಱಿ ವಿಷಜ್ವಾಲೆ ವಕ್ತ್ರಂಗಳಿಂ ಪಾ

ಪಾ. ಭೇ — 1. ಪುದು ಥೀರಂ. 2. ಡೆತ್ತಿ.

ಜಿಗಿದ ಕೆಂಡಂ ನೆತ್ತಿಯೊಳ್ಬರ್ದವೊಲಿರೆ ಫಣಿ ಮಾಣಿಕ್ಯಸಂದೋಹದಿಂ ತಂ |
ದುದೊ ಕೋಪಾಟೋಪದಿಂ ವಾಸುಗಿಗೆ ವಿಷಯುತಶ್ವಾಸವುಂ ಲೇಲಿ
[ಹಾನಂ ||೩೩||

ವ|| ಅಕುಂಭೀನಸವಿಜೃಂಭಣಕ್ಕೆ ನೆರೆದ ನೆರವಿಯೆಲ್ಲಮೊಲ್ಲಮೊಲ್ಲ ನುಲಿದಾಗಳ್ ಕಂಸನೊಳಂಗೊಂಡು ನೋಡಿ ಗದಗಂಪಂ ಕೊಂಡು ಮಹಾಮಂತ್ರವಾದಿಗಳಪ್ಪ ಮುನಿಮುಖ್ಯರ ಮರೆಗೊಂಡು ಪಂಚನಮಸ್ಕಾರಮಂ ಜಪಿಯಿಸುತ್ತುಮಿದನೇನುಮೆಂದು ಬಂದ ಕಲಿಯಂ ಕರೆಯಿಮೆಂಬುದು ಮಹಾಮಾತಿಂ ಮುನ್ನಮೆ:

ಗರುಡಧ್ವಜನೇಟ್ಟಿಪ್ಪಂದು |
ಮುರಿವುರಿನಂಜುರಿಯ ಮೇಲೆ ಸೀವೊಯ್ದವೊಲಾ ||
ಯ್ತುರಗಂಗಂ ನವಿಲಂ ಕಂ |
ಡುರಗನ ತೇಜನಾಯ್ತು ನೆರವಿಗಾಯ್ತಿಚ್ಚೋದ್ಯಂ ||೩೪||

ಸೂಸ ಮುಗಮುಗಪ ಕಂಪಿನ
ವಾಸನೆ ಪಾಯ್ದೀಗಳೆದಂತದುರಗೇಂದ್ರನ ತ |
ನ್ವಾಸನರೆಪಿರಿದ ಜಾಡಿಯ |
ವಾಸಿಗಗೊಳೆ ಪಾಯ್ದು ತುಂಬಿಯಂತಿರೆ ಕೃಷ್ಣಂ ||೩೫||

ಮಂಡಳಿಸಿದ ಮುಕ್ತಾಫಲ |
ಪಾಂಡುರಫಣಿಪತಿಯ ಮೇಲೆ ಶರದದಹಿಮುಕ್ತ |
ನ್ಮಂಡಲದ ಮೇಲೆ ಚೆಲ್ವಂ
ಕೊಂಡೆಸೆವ ಕಳಂಕದಂತಿರೆಸೆದಂ ಕೃಷ್ಣಂ ||೩೬||

ಅಜಳಜಲೋಚನಂಗೆ ವಿ |
ರಾಜಿಸ ಜಯಲಕ್ಷ್ಮಿ ತನ್ನದೊಂದೊಲಪಂ ಸೀ ||
ರಾಜಿಸುವಂತೆಸೆದುವು ಫಣಿ
ರಾಜನ ಬಿಡದೊಳೆವ ಪೆಡೆಯ ಮಣಿದೀಪಿಕೆಗಳ್ ||೩೭||

ಒಡೆವಂತಾಗಿರೆ ಭೂತಧಾತ್ರಿಯೆರ್ದೆ ಕಾಲ್ಮೇಲಾಗಿ ದಿಗ್ದಂತಿಗಳ್ |
ಕೆಡೆವಂತಾಗಿರೆ ಲೋಕಪಾಲಿವರಳ್ಕೆಂದಾರಯ್ವಾಕಾಶದಿಂ ||

ಬಿತುವಂತಾಗಿರೆ ತಾರಕಾನಿಕರಮೀಬ್ರಹ್ಮಾಂಡಭಾಂಡಂ ಸಿಡಿ |
ಲ್ದೊಡೆವಂತಾಗಿರೆ ಪಾಂಚಜನ್ಯನಿನದಂ ಪರ್ವಿತ್ತು 'ದಿಕ್ಪೂರವಂ' ||೩೮||

ವ|| ಈಶಂಖಮನಿನ್ನುಂ ಪಿಡಿದೊಡೆ ಜಗಂ ಪಿಡಿಗಿ ಕಿಡುಗುಮೆಂದು ಕರುಣಿಸಿದಂತೆ ಮುನಿವರ್ ಮನವಿಟ್ಟಿಪೆ ಶಾರ್ಙ್ಗಶಂಖಮನಿಟ್ಟಿಪಿ ನಾಗಶಯ್ಯೆಯಿಂದಿಟ್ದು ಪೋಪುದಂ ಕಂಡು ಕರೆದು ಕಂಸನಿಂತೆಂದಂ:—

ತೊದಳೇನೊ ಮೆಚ್ಚಿದೆಂ ನಿ
ನ್ನದಟಂಗೆಲೆ ಗೋಪ ತಪ್ಪದೀಬಸದಿಗೆ ನೀಂ ||
ನುದಯಕ್ಕೆ ಮುಂಚೆ ನಾಗ
ಹ್ರದದೊಳಗಣ ಸಾಸಿರೆಸಳ ತಾವರೆಯಲರಂ ||೩೯||

ವ|| ತಂದು ದೇವರ ಶ್ರೀಪಾದಪದ್ಮದೊಳ್ ಸಿದೊಡೆ ನಿನ್ನನಾನೆಯೋಲಿಸುವೆನೆಂಬುದುಮದಕ್ಕೊಂದು ಕೆಯ್ಯಾನೆ ತಂದಪೆನೆಂದಾ ಕೆಯ್ಕೊಳ್ ಕೃಷ್ಣನಾಯಮುನಾನದಿಯ ನಾಗಹ್ರದಕ್ಕೆ ಪೋದನದೆಂತಿರ್ದುದೆಂದೊಡೆ:—

ಶಾ॥ ಬಳೆದು ವಿಷಾಗ್ನಿಯಗ್ಗಳೆದೆಣೆಯೊಳರ್ದರಿವಗ್ನಿಯಂತೆ ನೀ-
ರೊಳಗುರಿದೇಳ್ವ ಪರ್ವ ಬಡಬಾಗ್ನಿವೊಲಾಮಘನಾದ್ರಿ ಪೀಡೆಗು |
ಮ್ಮಳಿಸಿ ಲಯಾಗ್ನಿ ಘೋರಗರಳಾಗ್ನಿಯನೀಭುವನತ್ರಯಂ ಭಯಂ |
ಗೊಳೆ ಕೆಳದಾರ್ಸುರಕ್ಕುಗುಳ್ವ ವಾರ್ಧಿವೊಲಿರ್ದುದು ಕಾಳಿಯಹ್ರದಂ ||

ಮಿಗೆ ನಂಜು ತಾಗೆ ನೀರ್ಗಳ್
ಪುಗಲೊಗೆದವೊಲೊಗೆಯೆ ಬುದ್ಬುದಾವಳಿ ಕಾಳೋ ||
ರಗನಿಶ್ವಾಸಾನಿಳನಿಂ
ಜಗುನೆಯ ಮಡು ತೆಕ್ಕತೆಕ್ಕನುಕ್ಕುತ್ತಿರ್ಕುಂ ||೪೧||

ಕಾಳಿಯನ ವಿಷದ ಪೊಗೆ ಮಿಗೆ
ಕಾಳಿಂದಿ ಕಱಂಗಿ ಕೂಡಿ ಕಾಡಿಗೆಗೊಂಡೀ ||
ಭೂಲಲನೆಯ ಬಾಸೆವೊಲಾ
ಯ್ತಾಲೋಕಿಗೆ ಕಱತೆಯದೊಱತೆಯ ಪರಿದೆಡೆಯುಂಟೇ ||೪೨||

ಪಾ. ಭೇ.--1 ದಿಗ್ವ್ಯಾಪ್ತರವಂ.

ಅನಿಲಂ ಮೋಗಜ಼ ಪೋಗಲಣ್ಮನಿವನಿಂತಂದಾದೆೞಡಂ ಶಂಖಚಕ್ರಾ |
ೞನನೇಂ ಕಾವನೆ ಸರ್ಪವೈರಿ ಸರವುಂ ಕೊಂಡೊಂದು ಗುಳ್ಕೆಂದು ನುಂ ||
ಗನೆ ದಲ್ ಪೋೞಿಯನೆತ್ತಿ ಕಾತ್ತನೆ ಉಯೋಗ್ರಜ್ವಾಳೆಯುಂ ತಿಂದು ತೇ |
ಗನೆ ಮಹಾಕಾಳಿಯುಮನುಜ್ಜಿ ಮುಕ್ಕನೆ ವಿಯನ್ನಾಕಾಳಿಯುಂ ಕಾಳಿಯುಂ ||೪೩||

ವ|| ಎನಿಪ ದಂದಶೂಕನ ದಾಡೆಗಳನೊಸರ್ತ್ತ ವಿಷದ ಮಡುವಿನಂತಿರ್ದ ಜಗುನೆಯ ಮಡುವಂ ಕ್ರೀಡಾಸರೋವರಮಂ ಪುಗುವಂತೆ ಪೊಕ್ಕು ;

ಅಱಲೆ ಫಣಿ ಕಳಲೆ ಕೇಸರ ||
ವೆಱಲೆ ರುವನ್ಮಧುಪಮಾಳೆ ಪರಿ ತನ್ನಯ ಪೊ ||
ರ್ಕುಱಿ ಕಮಳದಂತೆ ಜಗುನೆಯ |
ಸುೞಿಯೊಳ್ ಸೊಗಯಿಸುವ ಕಮಳದರಲಂ ಕೊಯ್ದಂ ||೪೪||

ವ|| ಕೊಯ್ದು ಗೋಪರ ಕೆಯ್ಯೊಳ್ಕೊಟ್ಟು ಮಗುಳೆ ಕಾಳಿಯಾನ್ವೇಷಣದಿಂ ಪೊಕ್ಕು:

ಕಾಳಿಂದಿಯ ಮಡುವಂ ಪರಿ |
ತೋಳಿಂ ತುಳ್ಕಾಡಿ ಮೊರೆದು ಮೇಲ್ವಾಯ್ದು ಮಹಾ ||
ಸ್ಥೂಳತರಂಗಾವಳಿಯುಂ |
ಕಾಳಿಯನೆಂದಡಸಿ ಪಿಡಿದು ಪೊಡೆದಂ ತಳದಿಂ ||೪೫||

ಅಡಗಿದ ಪಾವಂ ಜಗುನೆಯ
ಮಡುವಿನೊಳಱಸುವನ ಕರನಖಾರುಣರುಚಿಗಳ್ ||
'ಗಡ' ಕಟ್ಟಿಲೆಯೊಳ್ ಪಲವುಂ
ಸೊಡರಂ ಕೊಂಡಱಸುವಂತಿರೇಂ ತೊಳಗಿದುವೋ ||೪೬||

ಫಣರತ್ನಜ್ಯೋತಿಯಿಂ ಕಾಳಿಯನನಱಿಸಿ ಕಂಡೆಯ್ದಿ ಗೋಪಾಳಚೂಡಾ |
ಮಣಿ ಜೇವಂಬೆತ್ತ ಗಾರುತ್ಮತಮಣಿಯವೊಲಂಗಪ್ರಭಾಮಾಲೆ ದುರ್ವಾ ||
ಪಣಮುಂ ಕಾಳಿಂದಿಯೊಳ್ ಪುಟ್ಟಿಸಿ ಪಿಡಿಯಲೊಡಂ ಕೃಷ್ಣನಂ ಕಾಳಿ
[ಯಾಂಗಂ |

ಪಾ. ಭೇ—1. ಕಡು.

ಪೆಣದತ್ತ ಪಾದಮಸ್ತಂ ಲತೆಯೊಳ್ ಬೆದಿರಂ ಪರ್ವುವಂತೆ ತೊಂದಗುವರ್ಗಂ ||

ಬಿಸುಸುಯ್ಲೀಕ್ಷಿಸೆ ನುಂಗುವಂತೆ ಮೊಗಮಂ ಪ್ರೋದ್ವೃತ್ತಫಣಾಹಸ್ತದಿಂ |
ಮುಸುಕಂಗುಂದದೆ ಪೊಯ್ದು ಮುಂದಳಿಯುಸಂಗೋಪಾಂಗಮಂ ಕೂಡೆ ಬಂ ||
ಧಿಸಿ ಮೆಯ್ ಬೇಱಿರಿಲ್ಲಿಸಲ್ಲಮುರತತ್ತ್ವಾಟೋಪದಿಂ ತಬ್ಬು ಪು
ಟ್ಟಿಸಿದಂ ಪಂಕಜಲೋಚನಂಗೆ ವಿಜಯಶ್ರೀಕೇಳಿಯಂ ಕಾಳಿಯಂ || ೪೮ ||

ಮತ್ತಮಯೂರಗರ್ಜನೆಗೆ ಚಂದನಮಂ ಬಳಸಿರ್ದ ಪನ್ನಗಂ
ಸುತ್ತುವಂತೆ ತನ್ನ ಗಳಗರ್ಜನೆಗಂಜಿ ನಿಜಾಂಗಯಷ್ಟಿಯಿಂ ||
ಸುತ್ತಿದಿರ್ದ ಪನ್ನಗನ ಗಂಟಲನೊತ್ತಿದನೊತ್ತಿದೊಂದು ಕೈ
ಯ್ಮೃತ್ತಮಗೊಂದು ಕಾಲಭುಜಗಂ ಪಿಡಿದಂತಿರೆ ಕಾಳಿಯಾಹಿಯಂ || ೪೯ ||

ವ|| ಅಂತು ಕಾಳಿಯಂ ಗಾಳಿಯಂ ಗರಳಮುಮನೊಳಗಾಗಿ ಕಾಡಿ ಕಾಳಿಂದಿಯ ಸೋರ್ಮುಡಿಯಂ ಪಿಡಿದು ತರ್ಪಂತೆ ಪಿಡಿದು ತಂದು ಗೋಪಾಲಬಾಲಕರ ಕೆಯ್ಯೊಳ್ಕೊಟ್ಟು ಕಂಸನಲ್ಲಿಗೆ ಕಮಳದೊಡನೆ ಕಳಿಪಿ ಕೃಷ್ಣಂ ಗೋಕುಳಕ್ಕೆ ಮಗುಳ್ದಾಗಳ್:

ಅಯನಯನಿಧಾನತೇಜೋ |
ಮಯ ಕೇಂದ್ರಮನೊಲಿದು ಪತ್ತಲಾರ್ಕುಮೆ ಜಗತೀ |
ಜಯಿಯೆನಿಪ ಕಂಸ ನುಂಗುವ
ಕುಯಕಂ ಕೊಳ್ಗುಮೆ ಪರಾಕ್ರಮೋನ್ನತ ನಿನ್ನಂ || ೫೦ ||

ವ|| ಎಂದಶರೀರವಾಕ್ಯಮಂ ಕೇಳ್ದು ಪೂತನೆ ಮೊದಲಾಗಿ ಕಾಳಿಯಂಬರಂ ಮಾಡಿದಪಚಾರಮೆಲ್ಲಮವನ ಮಾಟಮೆಂದು ನಿಶ್ಚಯಿಸಿ ಪಲವು ಮುನಿಸುಮನೊಂದೆಮುನಿಸುಮಾಡಿ ಮುನಿದು ಕಂಸಂ ಮಾಡುವುಪಾಂಸವೆಲ್ಲಮನಱಿದುಮಿರ್ದನತ್ತ ಸಹಸ್ರಪತ್ರದೊಡನೆ ಕಾವ್ರುವೆರಸಿದ ಕಱಿಯನೆಯ್ದಿಲನಟ್ಟುವಂತೆ ನಾರಾಯಣನಟ್ಟಿನ ಪಾವುಮಂ ಪೂವುಮಂ ಕಂಸಂ ಕಂಡು ಪಾವಡರ್ದ ಪಂಗೆಮಂತೆ ಕಿಱಿದುಬೇಗಮಿರ್ದು ತನ್ನೊಳಿಂತೆಂದಂ;

ಬಲಯುತನಾದಂ ಬಗೆವಂ
ಕೊಲಲಾಱಂ ಕಾಳಿಯಂ ಗಡಿನ್ನಾರ್ಪವರಾರ್ |

ಸಲೆ ಕೊಲಬಾರದ ಪಗೆಯಾಂ
ಗೆಲವಾರದದೆಂದುಮೆಂತುಮೆಂಬುದು ಪದನೇ ॥೫೧॥

ವ॥ ಎಂದು ಮಂತ್ರಶಾಲೆಗೆ ಪೋಗಿ ಮಂತ್ರಿಗಳಂ ಒರಿಸಿ ಬೆಸಗೊಂಡವರಿಂತೆಂದರ್:—

ಪಗೆವಂ ಬಲ್ಲಿದನಾದನಾದನಿಸಪಪ್ರಚ್ಛನ್ನತಿಕಾಲದಿಬಾ ।
ಧೆಗಳಂ ಗೆಲ್ವನವೇಕೆ ಮುಟ್ಟು ಮುೞಿಯಿನ್ನುಪೇಕ್ಷಿಸಿರ್ದಪ್ಪೆ ॥
ರಿಗಳಲ್ತಾರುಮನಿಕ್ಕಿ ಬಾರಿಸುವರಾರ್ ಕೇಳ್ಮಂತ್ರಮಂ ಮಲ್ಲಗಾ ।
ಳಗಮಂ ಮಾಡಿಸಿ ಕೊಲ್ವುದುಳ್ಳುಡರಿಯಂ ಕಂಸಾವನೀವಲ್ಲಭಾ ॥೫೨॥

ಜಗಮೆಲ್ಲಮುೞಿಯೆ ತಂಗೆಯು ।
ಮಗನನದೆಂತಿಱಿವೆನೆಂಬೊಡನುಜರ್ತನುಜಾ
ದಿಗಳಲ್ಲದೆ ಭೂಪಾಳರ ।
ಪಗೆವರ್ಮತ್ತೊಂದು ದೇವದಿಂ ಬಂದಪರೇ ॥೫೩॥

ಮೊದಲೊಳ್ಕಲ್ಲನೆ ಮಲ್ಲರಿಂ ಮುಱಿಸು ಮಲ್ಲರ್ ಸೋಲ್ತೊಡಾ । ಬೇಗದೊಳ್ ।
ಮದವದ್ದಂತಿಯಿನೊಕ್ಕಲಿಕ್ಕಿಸು ಮದೇಭವ್ರಾತಮಾಸೋಲ್ತೊಡೊ ॥
ಟ್ಟಿದ ಕಿರ್ಕಿರ್ಪರ್ವೊಲಿರ್ದ ಖಳ್ಗಬಲಮಂ ಪೇಱ್ ಖಳ್ಗಗಳ್ ಸೋಲ್ತೊಡೋ
ವದೆ ನೀನಾತನ ಕಾದಿ ಕೊಲ್ ಪಗೆವನಂ ಕಾಲಾಂತಕಂ ಕೊಲ್ವವೊಲ್ ॥

ವ॥ ಎಂಬುದುಮಿದೇ ಮಂತ್ರಮೆಂದು ನಿಶ್ಚೈಸಿರ್ದಂ ಆ ಪ್ರಸ್ತಾವದೊಳ್ ಪಡಿಯುಳಂ ಪೊಡೆವಟ್ಟು ಮಹಾಪ್ರಮಾತ್ಯಂ ಬಾಗಿಲೊಳ್ ಒಂದಿರ್ದಪನೆನೆ ಕಂಸಂ ಬರವೇೞ್ಪೆಂಬುದುಮರೋಹಕಂ ಬಂದು ಕಂಡು ಸಾಷ್ಟಾಂಗವೆಱಗಿ ಮುಂದೆ ನಿಂದು:—

ಕರಿ ಕೊಲೆಯೊಳ್ಜನಂಗೆ ಪಿರಿದು ಕಾಯ್ಪಿನೊಳಗ್ನಿಗೆ ದಾಯಿಗಂ ಸಹೋ ।
ದರವಱಲಿಂ ಸಿಡಿಲ್ಗೆ ಮದದೊಳ್ಕಳಿ ಕಾಳಗೆ ಕಾಲತಕ್ಕನೊಳ್ ॥
ಗುರು ಗರುಡಂಗೆ ಮಾರಿಗೊವಜಂ ಮುಳಿಸಿಂದನೆ ನಿನ್ನ ಗಂಧಸಿಂ ।
ಧುರಪತಿಯುಗ್ರದಗ್ರಳಿಕೆಯುಗ್ರಳಮಾದುದಿಳಾಧನಾಯಕಾ ॥೫೫॥

ಗಿರಿ ಪರಮಾಣುವಾಗೆ ಕಡಲೆಯ್ದೆ ಲಯಾನಳನೆಯ್ದೆ ಲೋಕಮಂ ।
ಧರಿಯಿಸಿ ನಿಂದ ವಾಯುಚಯಮೆಯ್ದೆ ವಿಹಾಯಸಮೆಯ್ದೆ ಕಾರಣಂ॥
ಕರಿಗುಱಿದಂತು ದಂತಿಗಳೊಳೀಬಲಮೀಮದಮೀಪ್ರತಾಪಮೀ ।
ಭರಸಹಸತ್ವಮೀಸ್ಥಿರಮುಹೋದಯಮುಕ್ಕುಮೆ ಕಂಸಭೂಪತೀ ॥೫೬॥

ವ॥ ಎಂದು ಬಿನ್ನವಿಸಿ ತನ್ನ ಮನದ ವಿಷಾದಮಂ ಕಳೆದ ನಿಷಾದಿಗೆ ಚಿತ್ರಮುಮನಂಗಚಿತ್ರಮುಮನಿತ್ತು ನಿನ್ನ ಪಗೆಯುಂ ಬಗೆಯುಮಿಂದು ಸಾಧ್ಯಮಾದುದು; ಮಧುಸೂದನನಂ ಮುನ್ನಂ ಕೊಲ್ಲಿನಿನ್ನುಕೊಂದಪೆನೆಂದು ತೊಡೆಯುಂ ಪೊಯ್ದು ತಡೆಯದೆ ಚಾಣೂರಮಲ್ಲನಂ ಕರೆಯಲ್ಕಳಿಪಿ ವೀರಾವೇಶದಿಂ ಮೆಯ್ಯಱಿಯದೆ ಕಂಸನಿಂತೆಂದನೆಂದಾನುಮೊರ್ಮೆ ಗಂಡಗರ್ವದೆಸೆಯಿಂ ಕೈಟಭನೆಂಬ ದಾನವಂಗಾಂ ಪ್ರಾಣದಾನಂಗೆಯ್ದೊಡಾತಂ ವಿನೀತನಾಗಿ ನಿನಗೆ ಪರೋಪಕಾರಿಯ್ಯೆ ನಿನಗೀಭವದೊಳ್ಬಸಕೆಯ್ದಪ್ಪೆನಲ್ಲದೆ ಬೆಸದಿರ್ಪೆನಲ್ಲೆನೆನಗೆ ಬೆಸನೇನೆಂದೊಡಾನಾದಾನವನಳವಂ ಕಡುಪುಮಂ ಕಾಯ್ಪುಮಂ ಕಂಡೀರಕ್ಕಸನಾನೆಯಾಗಲ್ಕಕ್ಕನೆಂದು ಬಗೆದು ನೋಡಿ ನೀನೆನಗೈಸಾಲ ಗ್ರಾಮಿಕಮಪ್ಪ ನಾಗನಾಗಿರೆಂದೊಡಾಗೆ ನಿಜಗಲಿಯಪ್ಪಜಿತನೆಂಬ ಗಜಮಾಂ ಪರಾಜಿತಂಮಾಡಿಯಜಿತಂಜಯನೆಂಬ ಪೆಸರುಮಂ ವಿಕಾಸಿಸಿ ತಾನೇಕಕುಸುಮಕಾಸಾರಸರಿತ್ಸರೋವರಂಗಳೊಳ್ಪೊಕ್ಕು ಕುವಳಯಮನೆ ಕಿೞ್ತು ಮಸ್ತಕಪಿಂಡದೊಳೊಟ್ಟಿಕೊಂಡು ಕುವಳಯಾಪೀಡನುಮೆಂಬ ಪೆಸರುಮಂ ಪಡೆದುದೆಂದದಱ ಪೂರ್ವಾಂತರಮಂ ತಿಳಿಪಿ ಮಾಮಂತನಂ ಕರೆದು ಕಿವಿಯೊಳ್ ನಾಳೆ ನೀನುಂ ನಿನ್ನಾನೆಯುಂ ಗೋಪುರದೊಳ್ ಕಟ್ಟಿಗೊಂಡಿರ್ದು ಪುರಮಂ ಪುಗುವ ನಂದನ ಮಗನಂ ಯಮಪುರಮಂ ಪುಗಿಸಿ ನೋಂತರ ಪಗೆಯನೆತ್ತಿಱಿದಂತೆ ಮಾಡೆಂದು ಕಳಿಪಿದನನ್ನೆಗಂ ಚಾಣೂರಂ ಬಂದು ಭುಜಾಸ್ಫಾಲನಪುರಸ್ಸರಂ ಬೆಸಸುಬೆಸಸೆನೆ ಕಂಸನಿಂತೆಂದಂ:—

ಮೆಚ್ಚುಂಟು ನಾಳೆ ನಿಮ್ಮೊಳ್
ಮುಟ್ಟರಿಸುವ ನಂದಸುತನ ಮೂಗಿಂ ಬಾಯಿಂ ।
ದುಚ್ಚಳಿಸೆ ರುಧಿರಮೆನಗಾ
ದಚ್ಚಗಮಂ ಮುಱಿವೊಡೊತ್ತಿ ಮುಱಿ ಚಾಣೂರಾ ॥೫೭॥

ವ|| ಎಂದ ಕಂಸಂಗೆ ಚಾಣೂರಮಲ್ಲಂ ಮುಳಿದು;

ಕ್ರೋಶಿಪ ನೀವೀವಾತಂ |
ಮಾಣಿಕ್ಕಟ ಕೇಡೆಯುಂ ಕಿಮುಳ್ಳುವುದಕ್ಕೇ ||
ಚಾಣೂರನೇಕೆ ಮುಳಿದಾಂ |
ಪೂಣಿಸಿದೊಡೆ ಕೃಷ್ಣನೆಂಬ ಮಾನಸನೊಳನೇ ||೫೮||

ದೆಸೆಯುಂ ನುಂಗೆಂಬುದೇ ಸಾಗಸಮನುಡುಗಿ ಕಟ್ಟೆಂಬುದೇ ಕರ್ಕನಂ ಸಿಂಹಂ |
ಪೊಸದೀಡಾಡೆಂಬುದೇ ಕಾದಿಗಭದೊಡನೆ ಪೋರೆಂಬುದೇ ಕನ್ನನಯ್ಯೋ ||
ಪಸುವಂ ಕಾದುಂಬ ಪಾಲ್ವಲ್ಗಳ ಹಸುಳೆಯನಿಕ್ಕೆಂದು ಬಾಳ್ಗರ್ಗೆ ಪೇೞ್ವೇ
ಬೆಸವಂ ಚಾಣೂರಮಲ್ಲಂಗೆನಗೆ ಬೆಸಸಲೇಂ ತಕ್ಕುದೇ ಕಂಸರಾಜಾ ||

ಭಾವಿಪೊಡಾಂ ಜಟ್ಟಿಯುಮಂ |
ಗೋವಳನೊದಂಮ ದೇವ ಪೋರ್ದೊಡವನೆ ||
ನ್ನಾನೆಡೆಗೆ ವರ್ಪೆನೆನಗಂ
ದೇವಕಿಯ ಸುತಂಗಮಜಗಜಾಂತರಮಲ್ತೇ ||೬೦||

ವ|| ಆದೊಡಂ ದೇವರಭಿಪ್ರಾಯಮನಱಿದೆಂ; ಗೋಪ್ರಹರನಾನೆಗಿಕ್ಕುವುದು ತಕ್ಕುದಲ್ಲದೆ ತಗದೆನಲಾಗ; ನಾಳೆ ದೇವಕಿಯಕ್ಕೆಯನಸ್ಥಲದೊಳ್ ದೇವರ ಕಿವಿಗೆಯ್ದಿಸುವೆನೆಂತುಮಲ್ಲದೆ,

ತನು ತನಗೀಜಗತ್ರಯಮುಮಿಪ್ಪರ್ದು ತಾಂ ಗಡ ಪೇೞದಿಲ್ಲದ
ಮುರ್ಸಿನವರುಮೆಲ್ಲಮಿಲ್ಲರದೆ ಪೂತಸಿಯುಂ ಖರಕೇಶಿಯುಂ ಯಮಾ ||
ರ್ಜುನರನರಿಷ್ಟನಂ ಶಕಟನಂ ಪಟುಕಾಳಿಯನಂ ಕಡಂಗಿ ಕೃ |
ಷ್ಣನ ಪಸಿಱಿಂದನಾಂ ತೆಗೆಯದಿರ್ದೊಡೆ ನೀಂ ತೆಗೆಯೆನ್ನ ಜೋಳವಂ ||

ವ|| ಎಂದು ಚಾಣೂರಂ ಪೋಗೆ ಕಂಸಂ ಗೃಹಮಹತ್ತರನಂ ಕರೆದು ನಾಳೆ ಮಲ್ಲಗಾಳೆಗಮೆಂಬುದುಮಮಂ ಮಹಾಪ್ರಸಾದಮೆಂದ'ಪ್ಪಡಮಂ' ಸಮೆಯೆ;

ಪಿಕಿರನ್ನಾನಾಪತಾಕಾಪಟಳಪಟುಪಟೀಪಕ್ಷಪಿಕ್ಷೇಶದಿಂ ಮೆ-
ಚಕಿತಂ ರತ್ನಾವಳೀತೋರಣಕಿರಣಮರುಚ್ಚಾಪ ಚಾರಂಗಳಿಂ ಚಂ ||

---

ಪಾ. ಭೇ——1. ಬಂಡಮ.

ದ್ರಕಿತಂ ಪುಷ್ಪೋಪಹಾರೋಜ್ಜ್ವಲಮುಕುಳಮಿಲತ್ಕೀರ್ಣಕರ್ಪೂರದಿಂ ತಾ ।
ರಕಿತಂ ತಾನಾಗಿ ಪೋಲ್ತಿರ್ದುದು ವಿಮಳನಭೋರಂಗಮಂ ಮಲ್ಲರಂಗಂ ॥
ಪಿರಿದುಂ ಪೊತ್ತಿರ್ಪಿನಿಂ ಕಟ್ಟಿದ ಪಟ್ಟಯಿಗೆಗಳ ನಕ್ಷ್ಣನಕ್ಷತ್ರಮಾಳಾ ।
ಭರಮುಂ ಮುಂದಿರ್ದ ಕಂಭಂ ಕರಮೆಸೆ ಕಳಶಂ ಕುಂಭವಂತಾಗೆ ಬೇಗಂ ॥
ಕರೆದತ್ತುತ್ಪಾತಮಂ ನಿರ್ಗತವಿಪುಳತಳಾಸ್ಫೂಳವಂತಂ ಗವಾಕ್ಷ
ಸ್ಫುರಿತಾಕ್ಷಂ ಪಕ್ಷಕೇತುಶ್ರುತಧವಳಕರೇಣೋತ್ತಮಾಂಗಂ ತವಂಗಂ ॥

ವ ಅತವಂಗಮಂ ತೋರತುಱುಂಬುಂ ಪಿಡೆಯುಂ ಪೋಲೆ ಕೊಂಡ ಪ್ರೇಟಕಮುಂ, ಪೆತ್ತ ಕರವಾಳುಂ ಭಯಂಕರಾಕಾರಮಾಗೆ ಪೂಸಿದ ಸಿರಿಗಂಡದ ಕಂಪು ಸೂಡಿದ ಕೇದಗೆಯ ಸೊವಡುಂ ದೆಸೆದೆಸೆಗೆ ಸುಟ್ಟುರೆಗೆ ಗರುಡಧ್ವಜನೆಂಬ ಗಾರುಡನ ಬಾರಿಗೆ ವಧ್ಯಶಿಲೆಯನೇಱುವ ನಾಗಕುಮಾರನಂತೆ ವಿಷಮುಖನಪ್ಪ ಕಂಸಂ ಬಂದೇಱಲೊಡನೆ.

ಕೊನರಿಸೆ ಕೇಶಪಾಶರುಚಿ ಕಜ್ಜಲಿಯಂ ಮಣಿಭೂಷಣಾಂಶುಗಳ್
ಘನಕುಚಕೋಕಮಂ ಬಿಸಿಲನಾಗಿಸೆ ಚಂದ್ರಿಕೆಯಂ ತುಳುಂಕೆ ಲೋ ॥
ಚನಮೊಡನೇಱೆ ನೂಪುರಝಣತ್ಕೃತಿ ನೆತ್ತರಪಾನಗೋಷ್ಠಿಗಾ ।
ತನ ಬಟ್ಟಿಸಲ್ವ ಯೋಗಿನಿಯರಂತೆವೊಲೇಱಿದುದಂಗನಾಜನಂ ॥೭೪॥

ಪೊಳೆಯೆ ಪಟ್ಟಂಜೆ ಮಿಂಚೆ ಮಣಿಮಂಗಳದೀಧಿತಿಯಲ್ತು ತಾರೆ ಬಾ ।
ಳ್ವೆಳಗಿನ ಬಂಬಲೊಳ್ಸಕಳನಾಯಕದಾಯಕವಂಡನಾಥಮಂ ॥
ತಿಳಕಮಹಾಪ್ರಧಾನ ಮುಖಿಮಾಳ ಕುಮಾರಕರೊಳಗೊಂಡು ಬಾ
ಪಳಿಗೆಯನೇಱಿದಮರ್ಗಿಲನೇಱುವ ರಾಜರಾಜಚಂದ್ರದಿಂ ॥೭೫॥

ಅಸಿಪುಷ.............................

...ಗೇಡಮಿಲ್ಲದಂತು ಗಗನಂ ಬಂದಿರ್ದಸಿಂದ್ರಂ ಮಹಾ ॥
ಧ್ವನಿಯಿಂ ನಾರದನಾಟಕ ತನ್ನ ತನುವಂ ತೀವಿರ್ದ ಕಂಣಾಂಕ ಕೃ ।
ಷ್ಣನ ಚಾಣೂರನ ಮಲ್ಲಗಾಳಗವನಾಗಳ್ ನೋಡುವಾನಂದದಿಂ ॥೭೬॥

ವ॥ ಅನ್ನೆಗಂ ನಲಿಕ್ಕಮಾಗಸಕ್ಕಂ ಕೇಲ್ಗೊಂಡಂತಪ್ಪ ದೀರ್ಘಾಕಾರಮುಮೊಟ್ಟಿಂಟಾನೆಯನೊಂದು ಮಾಡಿದಂತಪ್ಪ ತೋರಮುಂ ಎರಡು ತೊಡೆಯುಂ ತೋಳ್ತೆಮಳ್ಪು ಬಿಗಿದುಟ್ಟ ನೇತ್ರಾವಳಿಯ ಚಲ್ಲಣಮುಂ ತಲೆ

ಎಡೆವಿಡದೆ ಮಲ್ಲಗಳನಂ ।
ಕುಡಿಮಿಂಚಿನ ತಟ್ಟ ಸುತ್ತಿದಂತಿರೆ ಬಾಳುಂ ॥
ಕಣಿತಲೆಯುಂ ಹಲಗೆಯುಮವು
ಕಿಡಿಗುಟ್ಟೆ ಪೞಂಚೆ ಸುತ್ತಿದರ್ಕರ್ರಾಳ್ಗಳ್ ॥೩೧॥

ಜಲನಿಧಿಯ ತೆರೆಗಳುಂ ವಿ ।
ಸ್ಫುರಿಕುಳಮುಂ ಬಳಸಿದಂತೆ ನೆಲನಂ ನೆಲೆಯೊಳ್ ॥
ತುರಗದಳಮುಂ ಮದೇಭೋ ।
ತ್ಕರಮುಂ ಬಳಸಿದುವು ಮಲ್ಲರಂಗಮನಾಗಳ್ ॥೩೨॥

ವ॥ ಅಂತು ಕಂಸಂ ಕೃಷ್ಣಂಗೆ ಕಡಿವಂದುದಂ ಕಂಡು ವಸುದೇವಂ ಬಲದೇವಂಬೆರಸು ಚಾತುರ್ದಂತಬಲಮುಂ ಕೂಡಿಕೊಂಡು ನಿಯುದ್ಧರಂಗದ ಕೆಲದೊಳ್ ಯುದ್ಧಸನ್ನದ್ಧರಾಗಿರ್ದಾಗಳುದ್ಧತನಾಗಿರ್ದ ಕಂಸಂ ಪಡಿಯಱನಂ ಕರೆದು ಕಿವಿಯೊಳ್ ಪೞರ್ದುವುದುಮಾತನಂತೆಗೆಯ್ವೆನೆಂದು ಪೋಗಿ ಯಶೋದೆಗೆಂದಂ—ನಿನ್ನ ಮಗನೆಲ್ಲಿಗಾದೊಡಂ ಕಾಳಿಗವೆಂದೊಡೆ ಪೂಣಿಗನಾಗಿ ಪರಿವರಿಯಪ್ಪನ ವ್ಯಸನಮುಂ ವ್ಯಸನಮುಳ್ಳೊಡೆ ಬಂದು ಚಾಣೂರಮಲ್ಲನೊಳ್ ಮಲ್ಲವೋರ್ದು ಪರ್ವಕ್ಕೆ ನೆರೆದರಸುಮಕ್ಕಳ ಕಣ್ಗೆ ಪರ್ವಮಂ ಮಾೞ್ಕೆಂದು ಕಂಸಮಹಾರಾಜಂ ಬೆಸಸಿಯಟ್ಟಿದಂ; ನೀವೆ ತಿವುರುಂ ತಿಳಕಮುಂ ಬೆರಸುತ್ತೊರಿಸಿ ಕೊಂಡು ಬರ್ಕೆ ಕೊಳ್ಳಿವಮಾತನೆಲ್ಲಿದನೆಂಬುದುಂ ಯಶೋದೆ ಮುಗುಳ್ನಗೆನಗುತಿಂತೆಂದಳ್ :—

ಎನ್ನ ಮಗನಾವ ತಿವುರಿಂ ।
ಮುನ್ನಿಕ್ಕಿದನಣ್ಣ ಶಕಟನಂ ಪೂತನಿಯುಂ ॥
ಪನ್ನಗನಂ ಯಮಳಾರ್ಜುನ ।
ರನ್ನರಕನನವನಿಸ್ಫಕನೇ ಚಾಣೂರಂ ॥೩೩॥

ವ॥ ನಿಜದಿಂ ಕೂರ್ಪುಳ್ಳನುಮಂ ಕತ್ತರಿವಾಣಿಯುಮಂ ಮಸೆಯಲೇಕೆ ನಿಂಗವಾನೆಯುಂ ಮುಗ್ಧವಲ್ಲಿಗಾವಭ್ಯಾಸಮಂ ಮಾಡಿದುದು; ಮುರಾಂತಕನುಂ ಅಂತಕನುಂ ಕೊಲ್ವುದನಿನ್ನು ಕಲ್ತಪರೆ ಕೇಳಿಮೆನ್ನ ಮಗಂ ನೀರೊಳ್ಳನಂ ಬಿಸಿಲೊಳಪ್ಪಡಂ ಬೆಂಕಿಯೊಳ್ಪೇಯುಂ ಜವನ ಕಯ್ಯೊಳ್ ಸಾಯಂ

ಏನುಂ ಬೇಡೆಂದಗೊಂಡು ಪೋಗಿಮೆಂಬಿನಿತರ್ಕೆ ಯಂಬುಜೋದರಂ ಬಂದ ಬ್ಬೆ ಪಸಿದೆನೆಂಬುದುಂ ಯಶೋದೆಯಿಂತೆಂದಳ್:—

ಸಮೆದಂ ಮೊಸರುಂ ಬಾಳ್ಕ್ಮೆಸ
ಉಮನಾಂ ಘನವಾಗಿ ತಂದೆನಿಕ್ಕಿದಪೆಂ ಲಂ।
ಬಮನೆನ್ನ ಮಲ್ಲ ಬಾಣೂ
ರಮಲ್ಲನಂ ಮುಱಿದು ಬಂದು ಪಸಿವಂ ಮುಱಿಯಾ ॥೭೪॥

ವ॥ ಅನಿತರ್ಕೆ ನಿನ್ನ ಪೊಡಪ್ಪುಂ ಪಸಿವುಂ ಕೂರಿತಕ್ಕುಮೆಂಬುದು ಮಕ್ಕಟಾ! ನಗ್ಗಮೆ ಕಾಳಗಮುಳ್ಳೆಡೆ ಕೂಱೀವುದೆಂದು ಪಡಿಯುಗ್ರ ನೀಬಂದೆನೆ ನಡೆಯಿಮೆಂದು ಮುಂದೆ ಕಳಿಪಿ ತಾನುಱಿಯೆ ತನ್ನೋಗೆಯ ಗೋಪರೆಲ್ಲರಂ ಮಲ್ಲವಸದನಂಗೊಳಿಸಿ ತಾಯ್ಗೆಱಗಿ ಪೊಡೆವಟ್ಟನಂ ಯಶೋದೆ ಪೇರಶ್ರೀಗಾಣ್ಮನಾಗೆಂದು ಪರಸೆ ಪರಕೆಯನಾಂತು ಗೋವ ರೊತ್ತುವ ತಿತ್ತಿರಿಗಾಳೆಯ ತೂತ್ಕಾರಮುಮೂದುವ ಕೊಳಲ ಸರಮುಂ ಪಿಡಿವ ಕೊಂಬಿನ ನಿನದಮುಂ ಪೊಯ್ವಕ್ಕವದ್ದಳೆಯ ದನಿಯುಂ ಉದ್ದುವ ಜುಂಚಯ ರವಮುಂ ಬಾರಿಪ ಜೆಂಕರಮುಂ ರವಳಿಯುಂ ನೆರಪೆ ನರಪ ತಿಯ ಪುರಕ್ಕಾಗಿ ನರಕಮಥನಂ ಮಸಗಿ ಬರ್ಪನನ್ನೆಗಂ-ಕಂಸನಿಂ ಮುಂ ದೊಂದು ಕಾಲಮುಪಕೃತನಾದ ಮಧುಮೆಂಬ ದಾಸವನವನ ಬೆಸದಿನಸಗನಾಗಿ ಬಿಸರುಹೋದರನನಸಗವೊಯ್ಲ್ಲಿನುಯ್ವೆನೆಂದು ಬಂದೊಗೆಯುತ್ತುಮಿರ್ಪ ಮಡಿವಳನ ಮುಂದಣ ಮಡಿಯುಮಂ ತನ್ನೊಡನೆಯ ಗೋವಳಗರುಟ್ಟು ಮೈಲಗೆಯುಮಂ ಮಧುಸೂದನಂ ಕಂಡು ಸಮಿಾಪಕ್ಕೆ ವಂದು

ಒಗೆದೊಗೆದು ಮುರಿದು ಜಗುನೆಯೊ
ಳಗಲೊಗೆದುಂ ಪಂಡುತಿರ್ಪ ರಜಕನನ್ನೇಸೀ ।
ಱಿಗಳನು ಡಲೀವುದೆಮಗೆನೆ ।
ಜಗಳಂ ಜಕ್ಕುಲಿಸಿದಂತೆ ನಕ್ಕಂ ರಜಕಂ ॥೭೫॥

ವ॥ ನಕ್ಕು ರಜಕಂ ನೀಱಿಗಳಂ ಕಂಸದೇವನುಡುಗುಮೆಂದಾತನ ಬೀಱುಡೆಯುವರುಮುಡುಗುಮಲ್ಲದೆಡೆಯ ಕಡೆಯ ಬಡವರ್ತುಡಬಾರದೆನೆ ಮುಕುಂದನಿನನಂದಮಕ್ಕುಮೆಂದು ಮತ್ತಂ ಕೇಳ್ ಬೇಡ:—

ಅಣ್ಣ ಱಿಯುದರಸರುಡುಪೀ
ಬಣ್ಣಂಗಳನುಡಲೆ ಬಯಸಿದಣ್ಣನ ನೊಸಲೊಳ್ ||
ಕಣ್ಣಂಟಿಪೆ ತೋಱಿ ನೊಸಲೊಳ್
ಕಣ್ಣುಳ್ಳನುಮಾಱನಾರ್ಪೊಡುಡುಪನೆ ತೊವಲಂ || ೩೬ ||

ವ|| ಎನೆ ವನಮಾಳ ಮಾಳಾಪ್ರಪಂಚಂ ಬೇಡ ಬಿಡುಬಿಡೆಂದು ರಣರಂಗಾರ್ಥಿಯಾಗಿ ರಂಗಕಾಱನ ಕೆಯ್ಯ ಸೀಱೆಯು ಸೆಱಿಯುಲನುಗೆಯ್ಯೆ ಬೊಡನೆ

ಕಟ್ಟಣ್ಮ ಕಾಱಸಿವಸಿ
ನ್ನುಟ್ಟಲ್ಲದೆ ಮಾಣನುಡಿಸುವೆಂ ಗಡಮಿವನಾ ||
ನುಟ್ಟಪೆನೆಂಬನ ಮುನ್ನು
ಳ್ಳುಟ್ಟುದುಮಂ ಸುಲಿದು ದೇಸೆಯುಂ ಕಾಸೆಯುಮಂ || ೩೭ ||

ವ|| ಇವಂ ಮುಟ್ಟದೊಡೆ ಕಂಸದೇವನಾಣೆಯೆನೆ ನೀ ಕುಡದೊಡೆ ಕಂಸದೇವನಾಣೆಯೆಂದಸಿತಾಂಬರಂಗಂ ಬರನೆ ರಜಕನಂಬರಂಬರಂ ತುಂಬುರಕೊಳ್ಳಯಂತೆ ಸಿಡಿದಿಂತಪ್ಪ ಸಿತಗನನೆಲ್ಲಿಯುಂ ಕಾಣೆನಾಣೆಗೆ ಮಾಱಾಣೆಯಿಟ್ಟಪಂ ನಾಯ ಬಾಯ ಸೀಱೆಯುಪ್ಪೊಡೆ ಸೀಱೆಯುತ್ತ ಸಾರೆಂದು ಮುಂದೀಡಾಡಿ

ಉಡುವ್ರೊಡುಡು ಪೇೞ್ವನರಸರ |
ಮಡಿವರ್ಗಮಿವ್ರುಟ್ಟು ಕೊಳ್ವ ಕಲಿಗಳ ಕಾಲಂ ||
ಪಿಡಿದಡಸಿ ಕಂಸದೇವನ
ಮಡಿವಳನೊಗೆದಾಱೆ ಪರಪಲಿಂ ಕಲ್ಪನೇ || ೩೮ ||

ವ|| ಎನೆ ಕೃಷ್ಣಂ ಕಿಱಿಮುಸಿಸುಮುಸಿದು

ಇದು ಸತ್ಯವೆಂಗೆವ ಕೆಯ್ಯಾ
ವುದು ತೋಱಿವಸಗನೆರತು ಕೆಯ್ಯಂ ಮುಱಿದಿ
ಕ್ಕಿದನೂರ ಸೀಱೆಗಸಗಂ
ತದೆವಡೆದನೆಸಿಪ್ಪ ನಾಡ ನುಡಿ ಪರಿಪಿಸೆಗಂ || ೩೯ ||

ವ|| ಮುಱಿದಿಕ್ಕಿ ಸುಬ್ಬರಸೂಱಿಯೊಳಗೆ ಮಡಿವರ್ಗಮಂ ಗೋ

ವರ್ಕಳ್ಗೆ ಸೂೞಿಗೊಟ್ಟು ಸಗವ್ರೊೞಿಯುಂ ಪ್ರಯ್ಯುಲಿಡಿಸೆ ಪ್ರೊೞಲಂ ಪ್ರುಯ್ಯು ಲಿಡಿಸಲೆಂದು ಪ್ರುರುಷೋತ್ತಮನಾಪುರದ ಗೋಪುರವಂ ತಾಗೆವರೆ ತೊಟ್ಟನೆ ಕಟ್ಟಿದಿರೊಳ್ —

ಮುಗಿಲಂ ಮುಟ್ಟಿದ ಕಾಳಕಾಯ ಬಲದಿಂದರ್ಕಂಗೆ ಕೋಡಿಟ್ಟ ಕೋ
ಡುಗಳಂ ಬೆಟ್ಟಿದ ಬೀೞಲಂತಲೆವ ಕೆಯ್ಯುಂ ಪೃಥ್ವಿಪಾತಾಳಮಂ ।
ಪುಗೆ ಗಾತ್ರಪ್ರಸರಮಿಟ್ಟು ಮೆಟ್ಟುವಳವಿಂ ಸಪ್ತಾರ್ಣವಂ ಸೂಸುವ
ಜರ್ಗಗಳಿಂದೇಂ ಕೆದಱುತ್ತೆ ಬಂದುದೊ ಮದಸ್ತಂಬೇರಮಂ ಬೀರಮಂ ॥

ಕಕುಭಂ ಮುಂಗಾಲ್ ಕಕುದ್ಮತ್ವತಿವಿಷಮವಿಷಾಣಂ ರದಂ ಪ್ರೂತ [ನಾತುಂ ।
ಗಕುಚಂ ಕುಂಭಸ್ಥಳಂ ಕಿೞ್ತವನಿಧರವೊಡಲ್ಗಾಳಿಯುಂ ಸ್ಥೂಳಹಸ್ತಂ ।
ಶಕಟಂ ಪೃಷ್ಟಪ್ರದಂ ಸಂಹರಿಪರಪರಿ ಕೋಪಾಗ್ನಿ ಕಣ್ಣುಗ್ರವಿದ್ವೇ
ಷಿಕವ್ರೊರ್ಮುಯ್ಯಾಗೆ ಮತ್ತಂ ಹರಿಗೆ ಮುನಿದು ಒರ್ವಂತೆ ಬಂದತ್ತಿ [ಭೇಂದ್ರಂ ॥ ೮೧ ॥

ಜಗಳದಿಭವಾಡುವಂತೆವ್ರೊ
ಲುಗೆ ನೆತ್ತರ್ಕುತ್ತಿ ಕೆಡಪೆ ಮದದಾನೆಗಳಂ ॥
ಮೊಗಮಿಕ್ಕಿಯಾನೆಯಿಱುಪೆಗೆ ।
ಮೊಗಮಿಕ್ಕದ ತೇದಿಸಿರ್ದುದೇಂ ಕರಿ ಪಿರಿದೋ ॥ ೮೨ ॥

ಅಂಗಕ್ಕೆಯ್ದದು ಗಗನಂ ।
ತುಂಗರವಕ್ಕೆಯ್ದದಿೞಯುಲಗನಿಕರಂ ಧೀಂ ॥
ಕಿಂಗೆಯ್ದದು ಧಾರಿಣಿ ಮುಳ್
ಸಿಂಗೆಯ್ದದು ಮೂಱು ಲೋಕಮಾಮದಗಜದಾ ॥ ೮೩ ॥

ವ॥ ಅಕ್ಕೈಟಭನೆಂಬ ಕಟ್ಟಾನೆ ಮುನ್ನಮೆ ತಾಂ ರಕ್ಕಸನಪ್ಪುದಱಿಂ ಮಾನಿಸರನೆ ಕಡಿಗೊಂಬುಗೊಂಡುಮೆಂತಾಂ ಮೆಚ್ಚಿದ ಕೋಲೆಗಡಿಯನಾಗಿ ಬಿಟ್ಟ ಕಣ್ಣುಂ ಬಿಗಿದ ಮೊಗಮುಂ ಮಸದ ಮುಸಿಸುಂ ಮೆಯ್ಯ ಮುಳುಕಮುಂ ಪ್ರತಿಮಾನದ ಪೊಣುಮೞಲೊಳಡಸಿದಾಸೆಯುಡುಂಗುಂ ಕೋಡ ಕಯ್ಯ ಪ್ರೋಂತಿವಣೆಯ ನೆತ್ತರನೊಂದು ಸಿಮಿಷಮುಂ ಕುಂ

ದಿಸದ ಕ್ರೋಧನಿಯೆಂಬಯ್ಯಾನೆಯ ಮದದೊಳ್ ಮದಕ್ಕೆ ವಂದ ಕೀನಾಶನಂತೆ ಮಾಮಸಕಂ ಮಸಗಿ ಬರೆ ಮುಂದೆ ಪರಿತಪ್ಪ ಪರಿಕಾರರ್ ರಾಮಕೃಷ್ಣರಂ ತೊಲಗು ತೊಲಗೆನೆ ಗೋವರೇಕಣ್ಣ ಕಣ್ಣ ತಲೆಯೊಳ್ತೊಲಗುವಂತಾಗಿ ಕಟ್ಟಾನೆಗೆ ಕಿಟ್ಟಳವಾದುದೇವಾನೆಯುಮದುರ್ವಪ್ಪ ದಸಾರ್ಪಡೆರೆನೆ ಪರಿಕಾರರೊಳೊರ್ಗೊರ್ವಂ ಕೊರ್ವಿದ ಗೋವಳಗರ ಗರವಂ ಕಳೆದಾನೆತಾನೆ ತೊಲಗಿಸಿದಪ್ಪುದು ನಮ್ಮಜ್ಜಗಮೇಕೆಂಬನಿತು ಬೇಗೆಯುಂ ಅಂಬುಂದೃಷ್ಟಿವಿಷಮುಂ ಪಿಷ್ಟಿಯ ಮುಖಮುಂ ಮುಷ್ಟಿಯುಮಪ್ಪ ಮದದಾನೆಯೊಳ್ ಕೃಷ್ಣಂ ಕೆಯ್ಯಿಕ್ಕೆ ಕರಿಯ ಕೆಯ್ಯುಂ ತನ್ನ ಕೆಯ್ಯ ಪವಣುಂ ತ್ರಾಣಮುಮಂ ಪಡಿಯಿಟ್ಟು ನೋಟ್ಪಂತೆ ಪಿಡಿದು ಪೊಣರ್ದು ಬಣಿವಾವಿನಂತೆ ಪೆಣೆಗ ಕೆಯ್ಯ ಕಾಲ ಕೊಂಬಿನ ಕುಂಭಸ್ಥಳದೆಡೆಗಳೊಳ್ ಬೆಣ್ಣೆದೊಡೆದ ಬಟ್ಟನಂತೆ ನುಣ್ಣ ನುಸುಳ್ದು ನೆರೆದು ನೋಟ್ಪರ ಕಣ್ಣಾಲಿ ತನ್ನ ಮನವಾಲಿ ವಿನೋದಕ್ಕಾನೆಯೊಳೊಡಕೊಂಡಲಿಕ್ಕಿ ಲಕ್ಕಿ ತೇಜದಿಂ ಚಾಣೂರಮಲ್ಲನೊಳ್ ಮಲ್ಲಿಕ್ಕುವುದಕ್ಕೆ ಶ್ರಮಮಂ ಮಾಡುವಂತೆ ಗಜಮಲ್ಲನೊಳ್ ಪ್ರತಿಮಲ್ಲಂ ಮಲ್ಲಪೋರ್ದು ಸಿಂಹನಾದದಿನಾರ್ದು--

ಬತ್ತಿದೊಡೊತ್ತಿ ಪತ್ತಿದೊಡೆ ಪತ್ತಿ ಪೊರಳ್ಚಿದೊಡಂ ಪೊರಳ್ಚಿ ಕಾ
ಯ್ದೆತ್ತಿದೊಡೆತ್ತಿ ಕುತ್ತಿದೊಡೆ ಕುತ್ತಿದ ಕೊಂಬನೆ ಕೂಂಕಿ ಕುತ್ತಿ ಕೂ ||
ಗರ್ತ್ತಿಗೆಯುಂ ಕನಲ್ಕೆಯಿನುಬ್ಬರ್ವವೊಲ್ ಮೊದದಿಂದಮುಜ್ಜಿ ಮು|
ನ್ನೆತ್ತಿ ಪಿಸುಳ್ದು ಯಾಶ್ರನುಗೆ ಮತ್ತಿಭಮಂ ಪರಿ ಪೊಯ್ದುರುಳ್ಚಿದಂ ||

ವ|| ಕಮ್ಮಾರನಂಬು ಕಮ್ಮಾರಂಗೆಂಬಂತೆ ಬಟ್ಟ ಉತ್ತರಬಾಳ್ಂತೆ ತನ್ನ ಕೊಂಬೆ ತನಗೆ ಘಾತುಕಮಾಗೆ ಸೊವಡಿಂಗಮಗ್ಗಿಸಿ ತುಂಬಿವೆರಸು ಕುಂಕಿ ಬಂಕಿ ಬಿದ್ದು ಕುವಳಯಾಪೀಡನಂ ಕುವಳಯಾಪೀಡನಂ ಮಾಡಿ

ಮತ್ತಗಜೇಂದ್ರದೊಳ್ ಪೊಣರ್ದು ಪೋಗೆ ಮದಂಬೊರೆದಂಗ|ಯಷ್ಟಿಯೊಳ್|
ಕತ್ತುರಿಯುಣ್ಪಿನಂತೆಸೆಯೆ ನೆತ್ತಿಯ ಸೆಂದುರಮುಂ ಲಲಾಟದೊಳ್ ||
ಪತ್ತಿ ಲಲಾಮದಂತಮರೆ ಕುಂಭಿಯ ಕೊಂಬರುಣಾಂಕವಾಂಕುಳೊಳ್
ಕುತ್ತಿದ ಪೊನ್ನ ಪಿಲ್ಲಣಿಗೆಯಂತಿರೆ ಕೈಟಭಮಲ್ಲನೊಪ್ಪಿದಂ ||೯೩||

ವ|| ಅಗಜಮಲ್ಲನೊಳ್ಪೋರ್ತಂಗೊಂಡುದೆ ಮಲ್ಲಸಿಂಗರಂಗೆಯ್ದಂ ತಾಗೆಗೆಲ್ಲಂ ಜೀವವಿರ್ದಂದದೊಳಾದ್ವಿಪದ ಪಿಂಗಾಲಂ ಪಿಡಿದು ಪಂದಿಯನೆತ್ತಿ ವಂತೆತ್ತಿದುಕೊಂಡು ಬಂದು ಮೂಱುಂ ಲೋಕಮುಂ ವೊಂದೆಡೆಗೆ ವಂದಂ ತಿರ್ದ ಮಲ್ಲಗಜದ ನಡುವಿಕ್ಕುತ್ತಿರ್ದುದಿಡೆ ತವಗದ ಮೇಲಿರ್ದ ಕಂಸಂಗೆ ಪಾಸ್ಸ ಗರ್ಭವುಪ್ಪ ಗಂಡಗರ್ವದಿಂ ಕೃಷ್ಣನಿಂತೆಂದಂ:—

ಅವಧರಿಸು ದೇವ ನಿನ್ನಂ
ತೆವ್ರೊಲಿಮರ್ಯಾದೆಯುವರಸರಾರಿರ್ದರಿದಂ ||
ನವನವದಾವಸಿತಮಿ
ನ್ನವು ಮದಗಜವೊಳವೆ ಕಾಡೊಳಂ ಕಂಜದೊಳಂ ||೮೬||

ಬಳವದ್ವಂತಿಯುನಿಂತುಪೇಕ್ಷಿಸುವರೇ ಬಿದ್ದಿರ್ಪದೀರ್ದಂತಿ ಭೂ |
ತಳದೊಳ್ ತೋರ್ಪುವನೆಂದು ತಂದೆಸಿದನಾಂ ದೇವರ್ಗಿದೆನ್ನೋಲಗಂ ||
ಗಳಮೋ ಗಾಳಿಯೊ ಸರ್ಪಮೊಗ್ರಮದಮೊ ಕಾಪಾಗ್ನಿಯೋ ಕೂಟಪಾ |
ಕಳಮೋ ತೋರ್ಪುಸು ವೈದ್ಯರಂ ಕರೆದೆಲೆ ಕಂಸಾವನೀಪಾಳಕಾ ||೮೭||

ವ|| ಎಂದಂತವೆತ್ತಿತರ್ಪಲ್ಲಿ ಕೆಯ್ಯ ಬಾಯಿಗೆ ಬಂದುದಿದಂ ದೇವರವಧಾರಿಸಿ ಭಂಡಾರದೊಳರಿಸುವುದೆಂದೆಳವೆತ್ತಿಯುಸೀಡಾಡುವ ಸ್ವೇಚ್ಛೆಕೇಯುನಂತೆ ಮುಂದಿಡಾಟುವನಿತಕ್ಕೆ ಕರಿಯ ಕೆಯ್ಯಂ ಕಾಲುಮಂ ಬಿಡಿವಸುವಂ ಕಳೆಯೆ ಕಾಳಿಯುಮಥನನಕ್ಕಟಾ ಸತ್ತುದೀಯಾನೆಯಾನೆಯುನಡ್ಡದೆಗೆದಂತಿದೀರ್ಘಚಾಣೂರಮುಷ್ಟಿಕಾದಿಗಳಪ್ಪ ಮಲ್ಲರಿಂದಮೆತ್ತಿದೀಡಾಡಿಂ ಪೊರ್ತಕ್ಕೆಪ್ರೊತ್ತುವಳೆವಪರೆನೆ ಮಲ್ಲರೆಲ್ಲರ ಮೊಗಮೊಯ್ಯನಾದುದಿನಿಸಱಿಂ ಕಂಸಂ ಗಂಡಗರ್ವದೊಡನೆ ವಿಗುರ್ವಣೆಯೆನೆ ತನಗೆ ತಾನೆ ಕಾಮುರ್ಗಿಬಂತೆ ಕರಗಿ ಪೋಗೆ -

ಗಜಮದಪಿಲುಪ್ತನಿಜಗುರು
ಭುಜಯುಗದೊಳ್ 'ಪಾಯ್ದು' ಮಧುಪಮಾಳಾಯುಗದಿಂ

---

ಪಾ. 1 ಪಾಸ್ಸು.

ವಿಜಯೋತ್ಸುಕನಾಗಿ ಚತು
ರ್ಭುಜನಾದವೊಲಿರ್ದನುಪನಿಯುದ್ಧಂ ಕೃಷ್ಣಂ ॥೮೮॥

ವ॥ ಇರ್ಪುದುಮೇವಯಿಸಿ ಕಂಸಂ ಕುಂಜಮುಂ ಬೀಸುವುದುಂ ।

ಎಲೆಯುತ್ತಿತ್ತಲಿದಿರ್ಚಿದಿರ್ಚು ಕಡಿಕೆಯ್ ನೀಂ ಬೇಗವಣ್ಮುಣ್ಮು ಮೆ ।
ಯ್ಗಲಿಯಾಗಾಗು ಕೊಲಲ್ಕೆ ನಿನ್ನ ಪವನಂ ಸುತ್ತಿತ್ತು ಮುತ್ತಿತ್ತು ಪೆ ।
ಣ್ಗೊಲೆಯೆಸೀಗುವೆ ಪೋಗಲುಣ್ಣದುರಿದ್ಯೆ ಮಣ್ಣಾಗಲೆಂದೆನ್ನ ತೋ ।
ಳ್ವಲೆಯೊಳ್ ಸಿಲ್ಕಿದೆಯೆಂದೆ ಸತ್ತಯೆನುತುಂ ಚಾಣೂರನೊಟ್ಟೈಸಿದಂ ॥

ವ॥ ಉರಲಿಸಿ ಮುಕುಂದಂ ಮುಗುಳ್ನಗೆನಗುತ್ತುಮಟ್ಟಿತೆಂಬ ದೈವಕ್ಕೆ ಪಾಳಂಬಟ್ಟೆಯೆಂದೇೞ್ತಂಟುಗೊಂಡು ಸಪೆರದಿಂದಪ್ಪಳಿಸಲೊಡನೆ

ಮುೞಿವನ್ನಂ ವೆರ್ದಿ ಮಾರ್ಮಲ್ಲರ ಗುರುಭುಜಮಂ ಶೇಷನಂ ಧಾತ್ರಿ [ಮುಂದ
ಣ್ಗೆಳಪನ್ನಂ ಪೊಯ್ಯು ಪಾಯ್ದಪ್ಪಳಿಸಿ ಶಿಖರಿಶೃಂಗಂಗಳಂ ಮುಚ್ಚರಂ ಬೇ ।
ಡೆಗಿಂ ಸೀವೆಂಬವೊಲ್ ಡೊಕ್ಕರಿಸಿ ದಿಗಿಭಹಸ್ತಂಗಳಂ ಮೂಜಗಂ ಬ ।
ಳ್ಕೆ ಪರ್ವಿತ್ತುರ್ವಿ ವೈಕುಂಠನ ವಿಜಯಭುಜಾಸ್ಫಾಳನಾಭೀಳನಾದಂ ॥

ಉಭಯವ್ಯೂಹಭವನ್ಮಹಾಕಳಕಳಂ ದೌವಾರಿಕೋದ್ಘುಷ್ಟ ಮ ।
ಲ್ಲಭುಜಾಸ್ಫಾಳನನಿಸ್ವನಂ ನೃಪಸಭಾಕೋಳಾಹಳಂ ದೇವದುಂ ।
ದುಭಿನಾದಂ ಮೊಳಗೆಲ್ಲ ಮಲ್ಲವಸೆಯೊಂದಿಂದೊಳ್ಮೆಕ್ಕೆಕ್ಕೆಯಿಂ ।
ನಭನಂ ದಿಕ್ಕುಮನೊಕ್ಕಲಿಕ್ಕಿ ಪೊಣರ್ದರ್ ಚಾಣೂರಚಕ್ರಾಯುಧರ್ ॥

ತಳಗಳಕೊಳ್ ಛಟಚ್ಛಟನೆ ಮಲ್ಲರ ತೋಳ್ಗಳ ಕೋಳ್ಕರಂ ಘಳಿಲ್ ।
ಘಳಿಲನೆ ಥಟ್ಟುಥೊಟ್ಟನೆ ಘನೋರುಯುಗಂಗಳ ಕೋಳ್ಕರಂಗಳಂ ॥
ಬಳಸುವ ಬೇಡಿಕೊಳ್ವ ಪಿಡಿಪೀವ ಮರುಳ್ಚುವ ನುಣ್ಚುವಾಸೆಯೊಳ್ ।
ಸೆಳೆವೆಡೆ ಸಂವರ್ ಪೊರ್ವಳವಿಯೊಪ್ಪಿದುದಿರ್ವರ ಹಸ್ತಯುದ್ಧದೊಳ್ ॥

ಉತ್ತಮಸತ್ವದಿಂ ಪಿಡಿದು ಚಾಣೂರನಂ ನೆಲಕಿಕ್ಕಿ ಕೃಷ್ಣನಾ ।
ಳ್ದುತ್ತಿದೊಡೊತ್ತಿ ಧಾತ್ರಿ ರಸೆಗರ್ದುದು ರಕ್ಕಸನೊಯ್ದ ಧಾತ್ರಿಯಂ ।
ಕೆತ್ತಿದನಾತನುಂ ಹರಿಯ ಗೋವನಿಸುಂಕಿ ತದಂಘ್ರಿಘಾತದಿಂ ।
ದತ್ತ ಪತಂಗವೊಂಗು ಶಕಟಂ ಮುೞಿದಾಶಕಟಂಬೊಲಿರ್ದನಂ ॥೯೩॥

ಓರೊರ್ವರನಕ್ಷಡದಿಂ ।
ದೂರಂ ಪೊಱಗಿಕ್ಕಿ ಪೋರ್ದರ್ ಪಾದಾಹತಿಯಿಂ ।
ಭೂರೇಣುವಾಗೆ ಹರಿಚಾ ।
ಣೂರರ್ವರ್ತ್ತೊಂದು ಮಲ್ಲಗಳನಂ ಸವೆದರ್ ॥೯೪॥

ಬೆದಱಿದ ಬೆಱಗಿಂ ಬೆಸ್ಕೆ
ಕ್ಕಿದ ಕೃಷ್ಣಂ ಮೊಗದೆಗೊಂಡು ಮೊಗದೊಳ್ಸುಯ್ಸಿ ।
ಕ್ಕಿದ ಚಾಣೂರನನಾರ್ದೆ
ತ್ತಿದನವಸಿಯನೆತ್ತುವಂತಿರಾದಿವರಾಹಂ ॥೯೫॥

ಕೆಡೆದಪೊರ್ದರ್ ಪೊರಳ್ದಪರ್ಗೆ ಪಿಡಿದಾದೊರ್ತ್ತಿದಪರ್ತ್ತಮೆ [ದರ್ ।
ನಿಡುಕಯ್ಯಂ ಪೊಡಿದಸೀರ್ಡಿದರೆಱಿದು ನೆಲಕ್ಕಿಕ್ಕಿದಕರ್ಙಂಕಿದಪರ್ ॥
ಗಡಿಯಾದಪರ್ತ್ತಿ ಗಾಯಂಗೊಳಲೆ ಪಿಡುಕದಾರಯ್ದಾರಯ್ದು ಗಾಯ ।
ಕ್ಕೆಡೆಗೊಟ್ಟು ಕಿರ್ಟ್ಟುಕೊಂಡಪೊರ್ಳದುಬಿಡಿಸಿದರ್ ಕೃಷ್ಣ ಚಾಣೂರಮಲ್ಲರ್

ಪಿಡಿವಡೆ ಕೃಷ್ಣನ ತೋಳ್ಗಳುಂ
ತೊಡೆಯುಂ ದೊಡ್ಡಿದು ಪಿದೆನ್ನ ಮುಷ್ಟಿಗೆ ಪವಣೆಂ ॥
ದಡಪಡಿಸಿ ನಳಿನನಾಭನ
ನಡುವಂ ಮುಱಿಯಲ್ಕೆ ನೋಡಿದಂ ಚಾಣೂರಂ ॥೯೬॥

ಮರನಂ ಕೆತ್ತು ಮುರಾರಿಯಾನನ ಕಿಱುಲ್ಮಂಗೆಮ್ಮು ರೋಮಂಗಳಂ ।
ಕರಮಂ ಕೊಟ್ಟ್ಕವಮಾರ್ತಸಿಲ್ಲ ಪಿಡಿಯಲ್ತ್ತ ತ್ತಾಳಿಯುಗ್ರಾಹಕಂ ॥
ಧರೆಯುಂ ಬೆಂಬಲಿದೊತ್ತಿ ಪತ್ತೆ ಗರಿಯಂ ಮುನ್ನೆತ್ತಿ ಪೊತ್ತಾಮಹೀ
ಧರನಂತಿಂತು ತಳರ್ಚಲಾನನೆ ಕರಂ ಚಾಣೂರನೇಂ ಶಕ್ತನೋ ॥೯೭॥

ವ॥ ಅಂತು ಮುನ್ನ ಮಾಡಿದ ಸಾಹಸಂಗಳಂ ಮಾಣ್ಪಂತೆ ಮುಂಗೆಯ್ವಲದೊಳ್ 'ಕೆದಕಿ' ನೋಡಿಯುವನರಿಯನುಂ ಪರಿಯನುಮಪ್ಪುದನಱಿದು ನರರುಂ ದೇವರ್ಕಳುಂ ನೋಡಿದಪರಿಳೆಯೊಳಂ ಬಾನೊಳಂ ನೋಂಕೆ [ನುಗ್ಗಾ

ಗಿರಿ ನೋೞ್ಪರ್ ನಾಳೆಯುಂ ನೋಡಿದಪರೆ ನೆರೆ ನೋೞ್ಪುಕ್ಕೆಂದು ಚಾಣೂರ
[ನಂ ನೋ
ೞ್ಪರ ನೇತ್ರಾನಂದಮಂ ನಂದಿಸುವುದುಚಿತಮಲ್ತೆಂ ಪ್ರೌಢರ್ದೆಂ ವಿನೋದ
ಕ್ಕರಿಗಾತ್ಮಪ್ರಾಣಮಂ ತೋಱದ ಹರಿ ಹರಿಗೊಟ್ಟಂತು ಬಲ್ಲೊಂದು ಜಾವಂ|

ವ|| ಇವನನೆನಿತೆನಿತಂ ಕೊಂಡಾಡುವೆನೆಂದು ವಿಶ್ವಂಭರಂ ಭರಂಗೆಯ್ಯಲೊಡನೆ—

ದಾರುಣದೊಳ್ ನಿಷ್ಠುರಚಾ
ಣೂರಭುಜಾದಂಡಪೃಷ್ಠದೊಳ್ ಪುಟ್ಟಿದುದಾ |
ನಾರಾಯಣನುಜಭುಜಾ
ವಾರಣೆಯೊಳ್ ಶಕ್ತಿರೂಪತೇಜೋಜ್ವಲನಂ ೧೨೦||

ವ|| ಅಂತು ಜಳಧದೊಳಶನಿ ಪುಟ್ಟುವಂತೆ ಜಳಧರಶ್ಯಾಮನೊಳ್ ಸರ್ವಶಕ್ತಿ ಪುಟ್ಟೆ

ಎಳವಿ ಮುಳಿಸಿಕ್ಕ ಕಳಲುಂ
ಕೆಳಗುಂ ತರಹರಿಸಿಕೊಳಲುಮಿಕ್ಕದ ಕಯ್ಯುಂ |
ಕೆಱಲುಮಣಿವಾಱದಸುರ
ನೆಱಲೊಳ್ಪೊಣರ್ವಂತೆ ಪೋರ್ದರ್ ಕಱಿಯ ಬೞಲ್ದಂ ೧೨೧|

ಪೊರ್ಕುೞಿಯೋಡೆ ಹರಿಯುಂ
ಮಾಕೊಳ್ವದೆ ತೆಗೆದ ಕಯ್ಯ ಬೞಿಯನೆ ಬಂದಂ ||
ಸೊಕ್ಕಿದಿಭಪತ್ನಿಯ ಕಯ್ಯೊಳ್
ಸಿಕ್ಕ ತೊಗಲ್ಪಾಪೆಯಂದದಿಂ ಚಾಣೂರಂ ||೧೨೨

ಹೊಣೆಸಿದದ ಕತ್ತುರಿಯುಂ
ಕಾಣಿಸೆ ಕತ್ತುರಿಯನಡುವಣಳಿರೋಮದವ್ರೋಲ್ ||
ಚಾಣೂರನಿರ್ದನೆನೆ ಸ
ಪ್ರಾಣದೊಳೇನವನಿಗಾಸನೋ ಪುರಮಥನಂ ||೧೨೩||

ಪೊರೆದು ಪೊರಲ್ವನವ್ವಳಿಸ ತೇಂಕುವ ತೇಂಕರ ಸುಯ್ವ ಸುಯ್ವದೆ |
ರ್ದರೆ ಜಡಿವ ಜವಂಗಿತುವನೂರ್ಮಡಿಯಪ್ಪ ಬೆಮತರ್ ಮಲ್ಲರಂ |

---

ಪಾ—1. ಜೆದಕೆ.

ಗುರುಗುಣರೇಣುವಂ ತೊಡೆವ ಮೆಯ್ಬ್ಬಮರೇಱದ ಭಂಗಿ ಕೆಸ್ಗ ಚಾ
ಣೂರನು(ಬು)ಸೋಲವುಂ ಹರಿಯು ಗೆಲ್ಲಮುನೇಂ ಪಿಸುಣಾಡುತಿರ್ದುದೋ ||

ಡೊಕ್ಕರಮಿಕ್ಕಿ ತಾಯೆನಿಸಿ ಕರ್ಱ ಬೆರಲೊಗ್ಗನೆಯುಂ ಧರಾತಲ |
ಕ್ಕಿಕ್ಕಿ ಮುರುಳ್ಚ್ಚ ನ್ಯೈಕಟಿ ಕಟ್ಟಲೆಗಳ್ಕ ಸಡಿಲ್ಚಿ ಕಂದರ ||
ಕ್ಕಿಕ್ಕಿದ ಬಾಹು ಕತ್ತರಿಗೆ ಬಾಯ್ವಿಡೆ ಕಾಯ್ದು ಪೊರಳ್ದು ಪೋಗೆ ಗಾ |
ಯಕ್ಕೊಳಗಾದೊಡಂ ಮುೞಯಲೊಲ್ಲದೆ ಬಿಟ್ಟಗಂಡಿವಿಟ್ಟವೋಲ್ ||

ವ|| ಅದಂ ಕಂಡು ಕಂಸಂ ಪಂದಿಗೆಱಗಿದ ನಾಯುಂ ಪೆಕ್ಕಳಸುವಂತೆ ತೊಡೆಯುನಪ್ಪಳಿಸಿ ದುಲ್ಲಹಮಲ್ಲದೊಳ್ ಘುಟಿಶೂರಚಾಣೂರವಿಕ್ರಮದಿಂ ಸಮಕರ್ತರಿಯನೆನ್ನಯ್ಯಂ ಕೊಂಡನೆಂದು ಪಡಿಗಯಿಸಲೊಡನೆ ಸಿಗ್ಗಾಗಿ ಬೇಗವಾಗಿ ಮನಂಗೆಯ್ದು ಮುನಿದು

ಹರಿ ಹೊಂಗಿ...ಪಿಟಮಿಡುಕದೆ |
ದುರದೊಳ್ ತಾಂ ಕೂಡೆ ಶಕ್ತಿಯುಂ ಪೂರಿಸೆ ಸ್ಯೆ ||
ತೆರೆಯುಂ ಮೇಲ್ವಾಯ್ದುಲಗಿನ |
ಗರುಡಸನಪ್ಪಿದವೋಲಪ್ಪಲಾಚಾಣೂರಂ ||೧೦೬||

ಚಳಕಿ ಚಳವಾಗೆ ಪಾರಂ |
ಸೆಳವೆಳವಂ ಪಟ್ಟ ಸಂಡಿ ಪುಟಪಟ್ಟರೆ ಕೆ ||
ಚ್ಚಳುರ್ವರಿಲೋಹದವೋಲ್ ಕಂ |
ತಳಲೋಹಂ ಕರಗಿ ಕೊರಗಿದಂ ಚಾಣೂರಂ ||೧೦೭||

ಬಡೆದುದು ಮುಷ್ಟಿಯುಂ ಪಿಡಿದ ಕೆಯ್ಯ್ ತಳಂ ಕಡುಸೋಂಕು [ಸೋಂಕಿ ಮೆ |
ಯ್ಯಡಗಡಗಾಯ್ತು ಡೊಕ್ಕರಿಸೆ ಕಂಸನ ಮಲ್ಲನ ಕಕ್ಷವಕ್ಷದೆ ||
ಲ್ವಡಿದುವು ಪೊಯ್ಯುತುಂ ತುಡಿಕಿ ತುಟ್ಟಿಸಿ ಕತ್ತರಿವಾಣಿಯಲ್ಲಿ ಕೆ |
ಯ್ದುಡುಕಿವವೋಲ್ ಬೆಲ್ಬಿಱಿದುವಾಹರಿ ಪೂರಿಸೆ ಮೆಯ್ಯ ಶಕ್ತಿಯುಂ

ಮಸಗದೊಡೆ ತನ್ನ ನೆಲೆಯುಂ |
ಮಿಸುಕದೆ ಮುನ್ನಿರ್ದ ತೆಱದಿನಿರ್ದುದೆ ಕಡೆಯೊಳ್ ||

ಮುಸುಗಿದೊಡೋವೋವೇಕ ।
ಗ್ರಸನಂಗೊಳ್ಳದೆ ಮಹಾಬ್ಧಿ ಮಾೞ್ಕುಂ ಜಗಮಂ ॥೧೦೯॥

ನೆಲನುಂ ಜಲನಿಧಿಯುಂ ಸಲೆ ।
ತಲೆವತ್ತುವ ತೆಱದಿನಿರ್ದು ಕಡೆಯೊಳ್ ನೆಲನಂ ॥
ಜಲಧಿ ಕಿಡಿಪಂತೆ ಕಿಡಿಸಿದ ।
ನಲಸದೆ ಚಾಣೂರಮಲ್ಲನಂ ಮುರಮಥನಂ ॥೧೧೦॥

ಬಿನ್ನಾಣಂ ಬಿನ್ನನಾಯ್ತೆನ್ನಳವಳವಱಿದತ್ತೆನ್ನ ಬಲ್ಪೆಯ್ದೆ ಮೆಲ್ಪಾ ।
ಯ್ತೆನ್ನಣ್ಮಂತಣ್ಮುತಾಯ್ತಂ ನಿಮಗೆಮಗಿದುದೆನ್ನೋಜೆ ಕಟ್ಟೋಜೆಯಾಯ್ತಾ
ನಿನ್ನೇವೆಂ ಸಾವೆನೆಂಬಂತಿರೆ ಬಱಲಿಸಿ ಚಾಣೂರನಂ ಭೂತಳಕ್ಕಂ ।
ಬನ್ನಕ್ಕಂ ತಂದು ತಂದಂ ರಿಪುನೃಪನ ಮನಕ್ಕಂದು ಕುಂದಂ ಮುಕುಂದಂ॥

ವ ॥ ಆಗಳ್ಮುಷ್ಟಿಕಂ ಮುಷ್ಟಿಗೊಂಡು ಮುನಿದು ಮೇಲ್ವಾಯಲೊಡನೆ;

ಎರಡುಂ ಕೆಯ್ಯಂ ಕೊಂಡಿ ।
ರ್ದಿರುಮಂ ಜೊಂಬೆಗಳನಾಡಿಪವನವೊಲವನೀ ॥
ರ್ದರ ತಲೆಯುಂ ತಾಟಿಸಿದಂ ।
ಬಿರಿವಿನೆಗಂ ತಾಳ ಕಾಯ್ಗಳಂ ತಾಟಿಪವೋಲ್ ॥೧೧೨॥

ವ॥ ಅಂತು ತಾಟಿಸಿ ಮಲ್ಲರಂಗದೊಳ್ ಪೂವಲಿಗೆದಱಿದಂತೆ ಮಸ್ತಿಷ್ಕಮೆತ್ತಲುಂ ಸೂಸೆ ಕುಂಕುಮರಸದಿಂ ಜೇಕೊರ್ಱವಿಯುನೊತ್ತಿದಂತೆ ಮೂಗಿಂ ಬಾಯಿಂ ಬಿಸಿನೆತ್ತರುಚ್ಚಳಿಸಿ ಸೂಸೆ ಬಿಸುಬಿಸುವೋಯ್ದು ಚಾಣೂರನ ಮುಷ್ಟಿಕನ ಪೆಣದ ಪೋಣರ ನಿಪ್ಪುರಿಗೂಡೆ ಕಂಡು ಕೆಳರ್ದು ಧೀರೋದ್ಧತದುಂದುಭಿಧ್ವಾನಮಹೀಧರದುರ್ಧರಮಹಾಕಾಳಪ್ರಳಯಕಾಳ ಕೋಳಾಹಳತಾಳಜಂಘಾತಳಪ್ರಹಾರಿ ವಜ್ರಮುಷ್ಟಿ ಮೊದಲಾಗೆ ಪೂಸಿದ ಸಿಂಧುರಮುಂ ಬೀಸುವ ಬಾಲಗಚ್ಚೆಯುಂ ಬೆರಸು;

ತೆಕ್ಕೆಯೊಳುಲಿದೆಯ್ತಂದು ಪೊ
ಣರ್ಕೆಗೆ ಮೇಲ್ವಾಯೆ ಮುಸುಱೆ ಮಲ್ಲಸಹಸ್ರಂ ॥

*

ಮರ್ಕಡೆ ಕಟಕಂ ಮುತ್ತಿದ ।
ಳುರ್ಕೆಯು ನೀಳಾಚಲಂಬೊಲಿರ್ದಂ ಕೃಷ್ಣಂ ॥೧೧೩॥

ವ॥ ಅಂತು ಮುಂತಣ ಶೂಲಮನೇಱುವಂತೇಱಿದ ಮಲ್ಲರ ಮೆಯ್ಗಳೆಲ್ಲಂ ಮುಱಿದು ನುರ್ಗುನುರ್ಗಾಗೆ ಮಲ್ಲಲಂಘನಂಗೆಯ್ದು ;

ಭ್ರಮರಿಗುಡೆ ಕೃಷ್ಣನಾಸಂ ।
ಭ್ರಮದಿಂ ಮತ್ತಿರ್ದ ಮಲ್ಲರೆಂಟುಂ ದೆಸೆಗುಂ ಗಂ ॥
ಡಮರಿಸಿದ ಮದಸ್ತಂಬೇ ।
ರಮದಿಡುದಿರ್ವಂತಿರುದಿರ್ದು ಪಱಿವಱಿಯಾದರ್ ॥೧೧೪॥

ಗುರುಭಂಡದ್ವಯದೊಳ್ ತಿರಿ ।
ತರೆಯಲ್ ಪತ್ತಿರ್ದ ಮಲ್ಲರುಲ್ಲಸಿತಾಕ್ಷಂ ॥
ಹರಿಚಕ್ರಂದೊಳಲಿಯುನನು
ಕರಿಸಿರ್ದಂ ಬಹಳಬಾಹುಜಾಳನ ಗತಿಯೊಳ್ ॥೧೧೫॥

ಮಲ್ಲರ ಮಸ್ತಕಂ ಕಮಳ.................... ।
...................................................॥
.................................... ।
.................................... ॥೧೧೬॥

ವ॥ ಮತ್ತಬಿಡಿದ ಮಲ್ಲರನಾನೆ ಮೆಟ್ಟಿದುದೆ ಸಂಡೆಂಬಂದಾವೆಡೆಯಂ ಪಿಡಿದೊಡಂ ಪಿಡಿದೆಡೆಯೆ ಗಾಯಮಾಗೆ ಬಳೆಯ ಪೆ..ನಾನೆ ಮೆಟ್ಟಿದಂತೆಲುವೆಲ್ಲಂ ನುರ್ಗುನುರ್ಗಾಗೆ ಮೆಯ್ಯು ತೊವಲಾಗೆ ಸಡಿಯಾಡುಗಳಂ ತಿವದವಲ ಬೇರಂಗಳನೀಡಾಡುವಂತೀಡಾಡಿದ ಚಾಣೂರಮಥನನ ಮೇಲೆ ಯುಗಸ್ತ್ಯನ ಮೇಲೆ ಕವಿದ ಕಡಲಂತೆ ಕವಿವ ಕಂಸನ ಚಾತುರ್ವಲಮುಂ ಬಲದೇವನುಂ ವಸುದೇವನುಂ ಕಂಡು ತಮ್ಮ ಬಲಮುಂ ಕೈವೀಸೆ ಪೆಣಮುಯಂ ಮಾಡೆ ನೆತ್ತರುಗಡಲಂ ಪರಿಯಿಸಿ ಕಟ್ಟೇವಮುಂ ಕಡುಮುಳಿಸು ಅಳವಿಗಱಿಯೆ ಸಿಗ್ಗಾಗಿ ಸ್ಫುರಿಸಲಾಱದೆ ಅಭಿನವನಾರಸಿಂಹಾಡಂಬರಮಗುರ್ವುಮದ್ಭುತಮುಮಾಗೆ—

ಮಾಡದ ಕಂಭಮಂ ಮಲಗಿನೊಳ್ಪುರಿಪಾಯ್ದು ನೆಲಕ್ಕೆ ಬಾಳನ ।
ಲ್ಲಾಡೆ ನೆಗಪ್ಪಿಕೊಂಡು ತೊಡೆಗಾನರಸಿಂಹನವೊಂಕಿ ಕಂಭದಿಂ ॥
ಮಾಡಿದ ಕಾಳರಕ್ಕಸನನಿಕ್ಕುವವೊಲ್ ನಖದಿಂ ಕರುಳ್ಗಳಂ ।
ತೋಡಿ ಪಿಸುಳ್ದು ಸೀೞ್ದು ಬಿಸುಟಂ ಕಲಿಕಂಸನನಬ್ಜಲೋಚನಂ ॥೧೧೭॥

ವ॥ ಅಂತು ಸೀೞ್ದೀಡಾಡೆಗೆಯ್ದುಮುದಂ ಕೈಕೊಳ್ಳದೆ ಕೋಟಿನಾರ್ದು ಮುರಿದೆರ್ದು ಖೇಟಕದಿಂ ಕರುಳಂ ತಕ್ಕೈರ್ಸಿ ಕತ್ತಿಗೆಯನೆತ್ತಿ ಮೇಲ್ವಾಯ್ದು ಪೊಯ್ದು ಕಂಸನ ಕಲಿತನಕ್ಕೆ ಕೌತುಕಂಬಟ್ಟು ಕಡಿತಲೆಯನೆಡದ ಕೆಯ್ಯೊಳ್ಪಿಡಿದು ತಱಗೆಲೆಯನೊರಸುವಂತೊರಸಿ ಬಿಸುಟು,

ಕೆಡೆಕೆಡೆಯೆಂದರಮಗನೊದೆ ।
ದೆಡಗಾಲೊಳ್ ತೊಡರ್ದು ಕರುಳೊಳೇಸಿರ್ದಂ ಕ ॥
ರ್ದಡಿಗಂ ಗೋವಳಸಿಕ್ಕಿದ ।
ತೊಡರೊಳ್ ಮಿಗೆ ಕೋದೆಱ್ವ ಪಾಪೆಯ ತೆಱದಿಂ ॥೧೧೮॥

ಕ್ಷಿತಿಗೊರ್ವನೆ ದುರ್ಜನನೊಂ ।
ದತಿವೇಗದೆ ಸತ್ತು ಮಾಡುವುಪಕಾರಮನ ॥
ಪ್ರತಿಮರ್ ಸಜ್ಜನರಾಚಂ ।
ದ್ರತಾರಕಂ ಬರ್ದು ಮಾಡಲೇನಾರ್ತಪರೇ ॥೧೧೯॥

ವ॥ ಅಂತು ಮಲ್ಲಾಮಲ್ಲಿಯಾಗಿ ಪೊಣರ್ದ ಮಲ್ಲರಂ ಮೇಲ್ವಾಯ್ದು ಕಂಸನುಮಂ ಕೃಷ್ಣನೊಂದೆ ಕೆಯ್ಯೊಳ್ ಕೆಯ್ಯ ಕೂಸನಿಕ್ಕುವಂತಿಕ್ಕಲೊಡನೆ,

ಅನಿಮೇಷಾಂಬೋಧಮುಕ್ತಂ ಸುರಿದುದಲರನಟ್ಟೇಱು ಬಾನ್ವಟ್ಟೆಯುಂ ಕೃ।
ಷ್ಣನ ಮೇಗೋರಂತೆ ಭೃಂಗವ್ಯತಿಕೃತ ಸುಮನೋರೇಣುಗಿರ್ವಾಣ
[ಬಾಣಾ ॥
ಸನರವ್ಯಂ ಚೈತ್ರತೂರ್ಯಸ್ತನಿತಮುಖರಿತಂ ಮಾಕರಂದಾರ್ದ್ರಧಾರಾ ।
ತನುಬಂಧೂಕೇಂದ್ರಗೋಪಂ ವಿಚಕಿಳಕುಳಮೇಘೋಪಳಾಸಾರಸಾರಂ

ಮಧುಮಾಯಾಮಥನಂ ಸಮುದ್ಧೃತಮಹಾಗೋತ್ರಂ ಗುಣೋದ್ಧಾಮಧ।
ರ್ಮಧರಾಕಂಟಕಕೈಟಭಾಪಹರಣಂ ಮಾಚಾಳಚಾಣೂರಮಾ ॥
ರಿಧಿಸಂಶೋಷಣಬಾಡಬಾಗ್ನಿ ಕಲಿಕಂಸಧ್ವಂಸಕಂ ತಾಳ್ದಿದಂ ।
ಕದನಕ್ರೀಡೆಯನಾಡಿ ನಿತ್ಯಜಯಮಂ ಶ್ರೀ ವೀರನಾರಾಯಣಂ ॥ ೧೨೧॥

॥ಗದ್ಯಂ॥

ಇದು ಮೃದುಪದಬಂಧಬಂಧುರಸರಸ್ವತೀಸೌಭಾಗ್ಯವ್ಯಂಗಭಂಗಿಸಿದಾನದಿನದೀಪವರ್ತಿ
ಚತುರ್ಭಾಷಾಕವಿಚಕ್ರವರ್ತಿ ನೇಮಿಚಂದ್ರ ಕೃತಮುಂ
ಶ್ರೀಮತ್ಪ್ರತಾಪಚಕ್ರವರ್ತಿ ವೀರಬಲ್ಲಾಳದೇವ ಪ್ರಸಾದಾಸಾದಿತ
ಮಹಾಪ್ರಧಾನ ಸೆಜ್ಜೆವಳ್ಳ ಪದ್ಮನಾಭದೇವ ಕಾರಿತಮುಮಪ್ಪ

## ನೇಮಿನಾಥ ಪುರಾಣದೊಳ್

ಶ್ರೀ ವೀರನಾರಾಯಣ ಪ್ರತಾಪವರ್ಣನಂ

ಅಷ್ಟಮಾಶ್ವಾಸಂ ಸಮಾಪ್ತಂ.






† ಮೂರು ಪ್ರತಿಗಳಲ್ಲಿಯೂ ಈ ಗ್ರಂಥವು ಇಲ್ಲಿಯವರೆಗೆ ಇರುವುದು.

ಮಾಡದ ಕಂಭಮುಂ ಮುಲಗಿನೊಳ್ಪರಿಪಾಯ್ದು ನೆಲಕ್ಕೆ ಬಾಳನ ।
ಲ್ಲಾಡೆ ನೆಗಪ್ಪಿಕೊಂಡು ತೊಡೆಗಾನರಸಿಂಹನವುಂಕಿ ಕಂಭದಿಂ ॥
ಮಾಡಿದ ಕಾಳರಕ್ಕಸನನಿಕ್ಕುವವೊಲ್ ನಖದಿಂ ಕರುಳ್ಗಳಂ ।
ತೋಡಿ ಪಿಸುಳ್ದು ಸೀೞ್ದು ಬಿಸುಟಂ ಕಲಿಕಂಸನನಬ್ಜಲೋಚನಂ ॥೧೧೭॥

ವ॥ ಅಂತು ಸೀೞ್ದಿಡಾಡೆಗೆಯ್ದುಮದಂ ಕೈಕೊಳ್ಳದೆ ಕೋಟಿನಾದುರ್ ಮುರಿದೆದುರ್ ಖೇಟಕದಿಂ ಕರುಳಂ ತಕ್ಕೈರ್ಸಿ ಕತ್ತ್ರಿಗೆಯನೆತ್ತಿ ಮೇಲ್ವಾಯ್ದು ಪೊಯ್ದು ಕಂಸನ ಕಲಿತನಕ್ಕೆ ಕೌತುಕಂಬಟ್ಟು ಕಡಿತಲೆಯನೆಡದ ಕೆಯ್ಯೊಳ್ಪಿಡಿದು ತಱಗೆಲೆಯನೊರಸುವಂತೊರಸಿ ಬಿಸುಟು,

ಕಡೆಕಡೆಯೆಂದರಮಗನೊದೆ ।
ದೆಡಗಾಲೊಳ್ ತೊಡರ್ದು ಕರುಳೊಳೇಸಿರ್ದಂ ಕ ॥
ರ್ದಡಿಗಂ ಗೋವಳಸಿಕ್ಕಿದ ।
ತೊಡರೊಳ್ ಮಿಗೆ ಕೋದೆಱ್ವೆ ಪಾಪೆಯ ತೆಱದಿಂ ॥೧೧೮॥

ಕ್ಷಿತಿಗೊರ್ವನೆ ದುರ್ಜನನೊಂ ।
ದತಿವೇಗದೆ ಸತ್ತು ಮಾಡುವುಪಕಾರಮನ ।
ಪ್ರತಿಮಂ ಸಜ್ಜನರಾಜಂ ।
ದ್ರುತಾರಕಂ ಬರ್ದು ಮಾಡಲೇನಾರ್ತಪರೇ ॥೧೧೯॥

ವ॥ ಅಂತು ವ ಲ್ಲಮಲ್ಲಿಯಾಗ ಪೊಣರ್ದಮಲ್ಲರಂ ಮೇಲ್ವಾಯ್ದು ಕಂಸನನುಮಂ ಕೃಷ್ಣನೊಂದೆ ಕೆಯ್ಯೊಳ್ ಕಯ್ದು ಕಾಸನಿಕ್ಕುವಂತಿಕ್ಕಲೊಡನೆ,

ಅನಿಮೇಷಾಂಬೋಧಮುಕ್ತಂ ಸುರಿದುದಲರನಟ್ಟೆಱು ಬಾನ್ವಟ್ಟೆಯುಂ ಕೃ।
ಷ್ಣನ ಮೇಗೋರಂತೆ ಭೃಂಗವ್ಯತಿಕೃತ ಸುಮನೋರೇಣುಗಿರ್ವಾಣ [ಬಾಣಾ ॥
ಸನರಮ್ಯಂ ಚೈತ್ರತೂರ್ಯಸ್ತನಿತಮುಖರಿತಂ ಮಾಕರಂದಾರ್ದ್ರಧಾರಾ ।
ತನುಬಂಧೂಕೇಂದ್ರಗೋಪಂ ವಿಚಕಿಳಕಾಳಮೇಘೋಪಳಾಸಾರಸಾರಂ

ಮಧುಮಾಯಾಮಥನಂ ಸಮುದ್ಧೃತಮಹಾಗೋತ್ರಂ ಗುಣೋದ್ಧಾಮಧ ।
ರ್ಮಧರಾಕಂಟಕಕೈಟಭಾಪಹರಣಂ ವಾಚಾಳಚಾಣೂರವಾ ॥
ರಿಧಸಂಶೋಷಣಬಾಡಬಾಗ್ನಿ ಕಲಿಕಂಸಧ್ವಂಸಕಂ ತಾಳ್ದಿದಂ ।
ಕದನಕ್ರೀಡೆಯನಾಡಿ ನಿತ್ಯಜಯಮಂ ಶ್ರೀ ವೀರನಾರಾಯಣಂ ॥ ೧೨೧॥

॥ಗದ್ಯಂ॥

ಇದುಮೃದುಪದಬಂಧಬಂಧುರಸರಸ್ವತೀಸೌಭಾಗ್ಯಭ್ರೂಭಂಗಭಂಗಿಸಿದಾನದಿನದೀಪವರ್ತಿ
ಚತುರ್ಭಾಷಾಕವಿಚಕ್ರವರ್ತಿ ನೇಮಿಚಂದ್ರ ಕೃತಮುಂ
ಶ್ರೀಮತ್ಪ್ರತಾಪಚಕ್ರವರ್ತಿ ವೀರಬಲ್ಲಾಳದೇವ ಪ್ರಸಾದಾಸಾದಿತ
ಮಹಾಪ್ರಧಾನ ಸೆಜ್ಜೆವಳ್ಳ ಪದ್ಮನಾಭದೇವ ಕಾರಿತಮುಮಪ್ಪ

## ನೇಮಿನಾಥ ಪುರಾಣದೊಳ್

ಶ್ರೀ ವೀರನಾರಾಯಣ ಪ್ರತಾಪವರ್ಣನಂ

ಅಷ್ಟಮಾಶ್ವಾಸಂ ಸಮಾಪ್ತಂ.

ನೇಮಿನಾಥಪುರಾಣಂ ಸಂಪೂರ್ಣಂ.†



† ಮೂರು ಪ್ರತಿಗಳಲ್ಲಿಯೂ ಈ ಗ್ರಂಥವು ಇಲ್ಲಿಯವರೆಗೆ ಇರುವುದು.